ಆದರೂ ಮೇಲ್ಕಂಡ ಸಹಕಾರ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ ಅಂತಿಮ ತೀರ್ಮಾನ ಕೈಗೊಳ್ಳುವ ಮೊದಲು ಸ್ವಾಭಾವಿಕ ನ್ಯಾಯ ತತ್ವಗಳನ್ವಯ ಸಂಬಂಧಪಟ್ಟವರಿಗೆ ಅವರ ಅಹವಾಲು ಏನಾದರೂ ಇದ್ದಲ್ಲಿ ಸಲ್ಲಿಸಲು ಮತ್ತೊಂದು ಅವಕಾಶ ನೀಡುವುದು ಸೂಕ್ತವೆಂದು ತೀರ್ಮಾನಿಸಿ ಮೇಲ್ಕಂಡ ಸಹಕಾರ ಸಂಘದ ಅಧ್ಯಕ್ಷರು/ಕಾರ್ಯದರ್ಶಿಯವರಿಗೆ ಈ ಕಛೇರಿಯಿಂದ ನೀಡಲಾಗಿರುವ ಉಲ್ಲೇಖ(2) ರಲ್ಲಿ ಕಾಣಿಸಿರುವ ದಿನಾಂಕ:19-11-2005 ರ ನೋಟೀಸಿನಲ್ಲಿ ಸದರೀ ಸಹಕಾರ ಸಂಘವನ್ನು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72ರನ್ವಯ ಸಮಾಪನೆಗೊಳಿಸಿ, ಸಂಘದ ನೊಂದಣಿಯನ್ನು ಏಕೆ ರದ್ದುಗೊಳಿಸಬಾರದು ಎಂಬ ಬಗ್ಗೆ ಅವರ ವಿವರಣೆ ಏನಾದರೂ ಇದ್ದಲ್ಲಿ ಸದರೀ ನೋಟೀಸು ತಲುಪಿದ ಏಳು (7) ದಿನಗಳೊಳಗಾಗಿ ಈ ಕಛೇರಿಗೆ ಸಲ್ಲಿಸುವಂತೆ ನಿರ್ದೇಶಿಸಲಾಗಿತ್ತು. ತಪ್ಪಿದಲ್ಲಿ ಸದರೀ ಸಹಕಾರ ಸಂಘವನ್ನು ಸಮಾಪನೆಗೊಳಿಸಲು ಸಂಘದ ನೊಂದಣಿಯನ್ನು ರದ್ದುಪಡಿಸಲು ಸದರಿಯವರ ಆಕ್ಷೇಪಣೆ ಏನೂ ಇಲ್ಲವೆಂದು ಪರಿಗಣಿಸಿ, ಈ ಬಗ್ಗೆ ನಿಯಮಾನುಸಾರ ಮುಂದಿನ ಸೂಕ್ತ ಕ್ರಮ ಕೈಗೊಳ್ಳಲಾಗುವುದು ಎಂದು ಸಹ ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸನ್ನು ಸದರೀ ಸಂಘದ ಇತ್ತೀಚಿನ ಲಭ್ಯವಿರುವ ನೋಟೀಸಿಗೆ ಅಂಚೆ ನೊಂದಣಿ ಮೂಲಕ ಕಳುಹಿಸಲಾಗಿತ್ತು. ಆದರೆ ಸದರೀ ನೋಟೀಸು ಸಂಘದಿಂದ ಸ್ವೀಕೃತಗೊಳ್ಳದೆ ಅಂಚೆ ಇಲಾಖೆಯಿಂದ ಹಿಂದಿರುಗಿಸಲ್ಪಟ್ಟಿದೆ.

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಮೇಲ್ಕಂಡ ಸಹಕಾರ ಸಂಘವನ್ನು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72(2)ರನ್ವಯ ಸಮಾಪನೆಗೊಳಿಸಿ ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಕ ಮಾಡುವುದು ಮಾತ್ರವಲ್ಲದೆ, ಸಂಘದ ನೊಂದಣಿಯನ್ನು ರದ್ದುಪಡಿಸುವುದು ಸೂಕ್ತವೆಂದು ತೀರ್ಮಾನಿಸಿದೆ.

ಅದರಂತೆ ಈ ಕೆಳಕಂಡ ಆದೇಶ.

**ಆದೇಶ**

**ಕ್ರಮಾಂಕ:ಡಿಆರ್‌ಬಿ-1:ಸಮಾಪನೆ:53:2005-06, ದಿನಾಂಕ:08ನೇ ಡಿಸೆಂಬರ್ 2005.**

1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 72(2)ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಕ್ರಮಾಂಕ:ಸಿಎಂಡಬ್ಲ್ಯೂ/69/ಸಿಎಲ್‌ಎಂ/2001 ದಿನಾಂಕ:21-11-2001ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಬಿ.ಸಿ.ಸತೀಶ್, ಸಹಕಾರ ಸಂಘಗಳ ಉಪನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಆದ ನಾನು ಉದಯ ಬಳಕೆದಾರರ ಸಹಕಾರ ಸಂಘ ನಿಯಮಿತ, ನಂ.78, 8ನೇ ಮುಖ್ಯರಸ್ತೆ, 4ನೇ ಹಂತ, ನಂದಿನಿ ಬಡಾವಣೆ, ಬೆಂಗಳೂರು ಈ ಸಹಕಾರ ಸಂಘವನ್ನು ಕೂಡಲೇ ಜಾರಿಗೆ ಬರುವಂತೆ ಸಮಾಪನೆಗೊಳಿಸಿ ಈ ಮೂಲಕ ಆದೇಶಿಸಿರುತ್ತೇನೆ. ಹಾಗೂ ಸಹಕಾರ ಸಂಘಗಳ ಕಾಯಿದೆಯ ಕಲಂ 73 ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ಉತ್ತರ ತಾಲ್ಲೂಕು, ಬೆಂಗಳೂರು ಇವರನ್ನು ಸದರಿ ಸಂಘದ ಸಮಾಪನಾಧಿಕಾರಿಯನ್ನಾಗಿ ಹೆಚ್ಚುವರಿ ಪ್ರಭಾರದಲ್ಲಿ ನೇಮಕ ಮಾಡಿ ಈ ಮೂಲಕ ಆದೇಶಿಸಿರುತ್ತೇನೆ. ಸಮಾಪನಾಧಿಕಾರಿಯವರು ಮೇಲ್ಕಂಡ ಸಹಕಾರ ಸಂಘದ ಪ್ರಭಾರವನ್ನು ಕೂಡಲೇ ವಹಿಸಿಕೊಂಡು, ಸಂಘದ ಸಮಾಪನಾ ಕಾರ್ಯವನ್ನು ತೀವ್ರಗತಿಯಲ್ಲಿ ಮುಗಿಸಿ, ಸಂಘದ ನೊಂದಣಿಯನ್ನು ರದ್ದುಪಡಿಸಲು ಆದಷ್ಟು ಬೇಗ ಪ್ರಸ್ತಾವೆಯನ್ನು ಈ ಕಛೇರಿಗೆ ಸಲ್ಲಿಸುವಂತೆ ಈ ಮೂಲಕ ಆದೇಶಿಸಿರುತ್ತೇನೆ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ:08-12-2005 ರಂದು ನೀಡಿರುತ್ತೇನೆ.

**ಬಿ.ಸಿ. ಸತೀಶ್**
ಸಹಕಾರ ಸಂಘಗಳ ಉಪನಿಬಂಧಕರು-1,
ಬೆಂಗಳೂರು ನಗರ ಜಿಲ್ಲೆ.

ಪಿ.ಆರ್. 2068

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ. ಬಿಜಾಪೂರ ಜಿಲ್ಲೆ,**

**ಬಿಜಾಪೂರ ರವರ ಕಛೇರಿ ನಡುವಳಿಗಳು**

**ಗುನ್ನೆ ನಂ:15/2002, ದಿ:24ನೇ ಜನವರಿ 2002**

**ಪಿ.ಎಸ್.ಐ, ಗಾಂಧಿಚೌಕ ಪೊಲೀಸ್ ಠಾಣೆ**

**ನಂ:ಇಎಕ್ಸ್‌ಇ:ಸಿಆರ್‌ಎಂ:ಡಿಟಿಸಿಆರ್:15:2001-02, ದಿನಾಂಕ: 19ನೇ ಡಿಸೆಂಬರ್ 2005**

**ಉಪಸ್ಥಿತರು:** ಶ್ರೀ ಕೆ.ಆರ್. ಗೌಡ್ರ
ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ.
ಬಿಜಾಪೂರ ಜಿಲ್ಲೆ, ಬಿಜಾಪೂರ.

**ಫಿರ್ಯಾಧಿದಾರರು** **ವಿರುದ್ಧ** **ಆರೋಪಿತರು**

ಪೊಲೀಸ್ ಸರ್ಕಲ್ ಇನ್ಸ್‌ಪೆಕ್ಟರ್
ಬಿಜಾಪೂರ ಶಹರ ವಲಯ.

1. ಮುಖೇಶಕುಮಾರ ತಂದೆ ಮಾಂಗಿಲಾಲ ವಾಹನ ಚಾಲಕ, ಸಾ॥ರಾಧಾನಗರಿ ಭೂಪಾಲ, ಮಧ್ಯಪ್ರದೇಶ.
2. ಕಿಶೋರ ತಂದೆ ಅಂಬಾರಾಮ, ಸಾ॥ದೇವಾಸ, ಮಧ್ಯಪ್ರದೇಶ, ಎರಡನೇ ಡ್ರೈವರ್
3. ಪವನ್ ಕುಮಾರ ತಂದೆ ಅಂಬಾರಾಮ, ಸಾ॥ಖಂಡುವಾ ಮಧ್ಯಪ್ರದೇಶ, ವಾಹನ ಕ್ಲೀನರ್,

**ಅರ್ಜಿದಾರರು**

1. ಶೆಮಶೇರಸಿಂಗ್ ತಂದೆ ರಸಪಾಲಸಿಂಗ್,
ವಾಹನದ ಮಾಲೀಕರು, 21 ಟ್ರಾನ್ಸ್‌ಪೋರ್ಟ್‌ನಗರ, ಇಂಧೋರ, ಮಧ್ಯಪ್ರದೇಶ.

**ಪ್ರಕರಣದ ಮುಖ್ಯಾಂಶಗಳು**

ದಿ:24.1.2002 ರಂದು ಆರಕ್ಷಕ ವೃತ್ತ ನಿರೀಕ್ಷಕರು ಬಿಜಾಪೂರ ಶಹರ ವಲಯ ಇವರು ತಮ್ಮ ಕಾರ್ಯಾಲಯದಲ್ಲಿ ಇದ್ದಾಗ 20-00 ಗಂಟೆಗೆ ಕೌಜಲಗಿ ತಾಂಡಾದ ಹತ್ತಿರ ಒಂದು ಸ್ಪಿರೀಟ್ ತುಂಬಿದ ಒಂದು ಟ್ಯಾಂಕರ್ ನಿಂತಿರುತ್ತದೆ ಅಂತಾ ದೊರೆತ ಮಾಹಿತಿಯ ಮೇರೆಗೆ, ತಾನು ಮತ್ತು ತಮ್ಮ ಸಿಬ್ಬಂದಿಯೊಂದಿಗೆ ತಮ್ಮ ಜೀಪ್ ನಂ:ಕೆಎ-28-ಜಿ-213, ನೇದ್ದರಲ್ಲಿ ಭಾತ್ಮಿ ಬಂದ ಜಾಗೆಯ ಹತ್ತಿರ ಹೋಗಿ ನೋಡಲಾಗಿ ಕೌಜಲಗಿ ತಾಂಡಾದ ಸಮೀಪ ಒಂದು ಟ್ಯಾಂಕರ್ ನಿಂತಿದ್ದು ಬ್ಯಾಟರಿ ಬೆಳಕಿನಲ್ಲಿ ನೋಡಲಾಗಿ ಅದರಲ್ಲಿ 3 ಜನರು ಕುಳಿತಿದ್ದು ಡ್ರೈವಿಂಗ್ ಸೀಟಿನ ಮೇಲೆ ಕುಳಿತವನ ಹೆಸರು ಕೇಳಲಾಗಿ ಆತ ಮುಖೇಶಕುಮಾರ ತಂದಿ:ಮಾಂಗಿಲಾಲ ಸಾ।।ರಾಧಾನಗರಿ, ಭೂಪಾಲ, ಮಧ್ಯಪ್ರದೇಶ ಎಂದು ಹೇಳಿದ್ದು ಆತನಿಗೆ ಟ್ಯಾಂಕರಿನಲ್ಲಿ ಏನಿದೆ ಎಂದು ವಿಚಾರಿಸಲಾಗಿ ಅವನು ಸದರಿ ಟ್ಯಾಂಕಿನಲ್ಲಿ ಸ್ಪಿರೀಟ್ ಲೋಡ್ ಇರುತ್ತದೆ ಅಂತಾ ಹೇಳಿದನು. ಸದರಿಯವನಿಗೆ ಸ್ಪಿರೀಟ್ ಸಾಗಿಸಲು ಪರ್ಮಿಟ್ ಹಾಗೂ ಲೈಸನ್ಸ್ ವಗೈರೆ ಕಾಗದ ಪತ್ರಗಳು ಇರುತ್ತವೆಯೇ ಹೇಗೆ ಅಂತಾ ವಿಚಾರಿಸಲಾಗಿ ಅವನು ಇಲ್ಲವೆಂದು ಉತ್ತರಿಸಿದ. ಸದರ ಟ್ಯಾಂಕರ್ ನಂಬರ್ ನೋಡಲಾಗಿ ಅದು ಎಂಪಿ:09:ಕೆ:9342 ಇದ್ದು, ಸದರ ಚಾಲಕ ಶೀಟ್ ಮೇಲೆ ಕುಳಿತವನಿಗೆ ಎಷ್ಟು ಸ್ಪಿರೀಟ್ ಇರುತ್ತದೆ ಅಂತಾ ವಿಚಾರಿಸಲಾಗಿ, 11,000 ಲೀಟರ್ ಸ್ಪಿರೀಟ್ ಇರುತ್ತದೆ. ಅಂತಾ ಹೇಳಿದನು. ಸದರಿ ಟ್ಯಾಂಕರ್‌ನಲ್ಲಿ ಕುಳಿತ ಇನ್ನೊಬ್ಬನ ಹೆಸರು ಕೇಳಲು ಆತನು ತನ್ನ ಹೆಸರು 2) ಕಿಶೋರ ತಂದೆ ಅಂಬಾರಾಮ ಸಾ।।ದೇವಾಸ, ಮಧ್ಯಪ್ರದೇಶ, 2ನೇ ಡ್ರೈವರ್ ಅಂತಾ ಹೇಳಿದನು. 3) ಪವನಕುಮಾರ ತಂದೆ ರಾಮಸಿಂಗ್ ಸಾ।।ಖಂಡುವಾ ಮಧ್ಯಪ್ರದೇಶ ಎಂದು ಮತ್ತು ತಾನು ಕ್ಲೀನರ್ ಅಂತಾ ಹೇಳಿದನು. ಸದರಿಯವರಿಗೆ ಟ್ಯಾಂಕರಿನ ಮಾಲೀಕರು ಯಾರು ಅಂತಾ ವಿಚಾರಿಸಲಾಗಿ ಅವರು ಸದರ ಟ್ಯಾಂಕರ್ ಮಧ್ಯಪ್ರದೇಶದ ಶಾಮಸೇರಸಿಂಗ್ ತಂದಿ:ರಸಪಾಲಸಿಂಗ್ ರವರಿಗೆ ಸೇರಿದ್ದು ಅಂತಾ ಹೇಳಿದರು. ಸದರಿಯವರು ಸಿಕ್ಕಾಗ 20-30 ಗಂಟೆ ಆಗಿತ್ತು ಅವರನ್ನು ಸ್ಥಳದಲ್ಲಿಯೇ ದಸ್ತಗಿರಿ ಮಾಡಿ ಸ್ಪಿರೀಟ್ ತುಂಬಿದ ಟ್ಯಾಂಕರ್ ಸಮೇತವಾಗಿ ಗಾಂಧಿಚೌಕ ಪೊಲೀಸ್ ಠಾಣೆಗೆ ಕರೆದುಕೊಂಡು ಬಂದು ಸದರಿ ಟ್ಯಾಂಕರ್ ಠಾಣೆಯ ಆವರಣದಲ್ಲಿ ನಿಲ್ಲಿಸಿ ಸಿಬ್ಬಂದಿಯವರ ಸಹಾಯದಿಂದ ಇಬ್ಬರು ಪಂಚರನ್ನು ಹಾಜರುಪಡಿಸಿಕೊಂಡು, ಮೇಲಿನ ಸಂಗತಿಗಳನ್ನು ತಿಳಿಸಿ ಪಂಚರ ಸಮಕ್ಷಮ ಖುಲಾಸ ಪಂಚನಾಮ ಮಾಡಿ, ಟ್ಯಾಂಕರ್ ನಂ:ಎಂಪಿ:09:ಕೆ:9342 ಹಾಗೂ ಅದರಲ್ಲಿದ್ದ 11,000 ಲೀಟರ್ ಸ್ಪಿರೀಟನ್ನು ಜಪ್ತಿ ಮಾಡಿದ್ದು ಇರುತ್ತದೆ. ಸದರಿ ಪಂಚನಾಮೆಯ ವೇಳೆಯಲ್ಲಿ ಜಪ್ತಾದ ಸ್ಪಿರೀಟದಿಂದ ಶ್ಯಾಂಪಲ್ ಕುರಿತು 750 ಎಂಎಲ್‌ದ 5 ಬಾಟಲಿಗಳಲ್ಲಿ ಶ್ಯಾಂಪಲ್ ಕುರಿತು ಸ್ಪಿರೀಟನ್ನು ತೆಗೆದು ಶೀಲು ಮಾಡಿ ಪಂಚರ ಸಹಿ ಹಾಗೂ ತಮ್ಮ ಸಹಿ ಚೀಟಿಗಳನ್ನು ಅಂಟಿಸಿದರೆಂದು, ಮತ್ತು ಸದರ ಪಂಚನಾಮೆಯನ್ನು 2100 ಗಂಟೆಯಿಂದಾ 2230 ಗಂಟೆಯವರೆಗೆ ಲೈಟ್ ಬೆಳಕಿನಲ್ಲಿ ಬರೆದು ಪಂಚರಿಗೆ ಓದಿ ಹೇಳಲಾಯಿತು. ಈ ಕೃತ್ಯವು ಕರ್ನಾಟಕ ಅಬಕಾರಿ ಕಾಯ್ದೆ, ಅಧಿನಿಯಮ 1965ರ ಕಲಂ 32, 34 ದಂಡನಾರ್ಹರಾಗಿರುವುದರಿಂದ, ಸರ್ಕಲ್ ಪೊಲೀಸ್ ಇನ್ಸ್ ಪೆಕ್ಟರ್ ಬಿಜಾಪೂರ ಶಹರ ವಲಯದವರು ತಾವೇ ಸರ್ಕಾರದ ವತಿಯಿಂದ ಫಿರ್ಯಾಧಿಯನ್ನು ಸಲ್ಲಿಸಿರುವರು. ಅದನ್ನು ಠಾಣಾಧಿಕಾರಿಗಳು ಗಾಂಧಿಚೌಕ ಪೊಲೀಸ್ ಠಾಣೆ ಗುನ್ನಾ ನಂಬರ್:15:02 ಕಲಂ 32, 34 ಕರ್ನಾಟಕ ಅಬಕಾರಿ ಅಧಿನಿಯಮ 1965ರ ಪ್ರಕಾರ ದಿನಾಂಕ: 24.1.2002 ರಂದು 23000 ಗಂಟೆಗೆ ಗುನ್ನೆಯನ್ನು ದಾಖಲು ಮಾಡಿ ಪ್ರಥಮ ವರ್ತಮಾನ ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ಮತ್ತು ಮೇಲಾಧಿಕಾರಿಗಳಿಗೆ ಕಳುಹಿಸಿರುವರು. ನಂತರ ಪ್ರಕರಣದಲ್ಲಿಯ ದಾಖಲು ಮಾಡಿದ ಮಹಜರ ಪ್ರತಿ, ಪ್ರಥಮ ವರ್ತಮಾನ ಪ್ರತಿ, ಹಾಗೂ ಜಪ್ತಿ ಮಾಡಿದ ಸ್ವತ್ತುಗಳನ್ನು ಸೂಕ್ತಕ್ರಮಕ್ಕಾಗಿ ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ರಸಾಯನಿಕ ವಿಶ್ಲೇಷಣಾ ವರದಿ ನಂಬರ್ ಸಿ.ಸಿ.ಎಲ್ 1302:2002 ದಿನಾಂಕ:18.2.2002ರ ವರದಿಯಲ್ಲಿ ಸದರಿ ಶ್ಯಾಂಪಲ್‌ಗಳಲ್ಲಿ ಮದ್ಯಸಾರವು ಪತ್ತೆಯಾಗಿದ್ದು, 750 ಎಂಎಲ್‌ದ ಪ್ರತಿಯೊಂದು ಬಾಟಲಿಗಳಲ್ಲಿ 67.03 ಓ.ಪಿ. ಮದ್ಯಸಾರದ ಅಂಶವು ಇರುತ್ತದೆ ಎಂದು ತಜ್ಞರು ಅಭಿಪ್ರಾಯಪಟ್ಟಿದ್ದಾರೆ. ಅಲ್ಲದೆ ಕಡತದಲ್ಲಿ ಇಡಲಾದ ರಸಾಯನಿಕ ವಿಶ್ಲೇಷಣಾ ವರದಿ ನಂಬರ್ ಸಿ.ಎಸ್.112/2002 ದಿನಾಂಕ:26.8.2002ರ ವರದಿಯಲ್ಲಿ ಸದರಿ ಶ್ಯಾಂಪಲ್‌ಗಳಲ್ಲಿ ಮದ್ಯಸಾರವು ಪತ್ತೆಯಾಗಿರುವುದು ಕಂಡು ಬರುತ್ತದೆ.

ವಾಹನದ ಮಾಲೀಕರಾದ ಶಮಶೇರಸಿಂಗ್ ತಂದೆ:ರಸಪಾಲಸಿಂಗ್, 21 ಟ್ರಾನ್ಸ್‌ಪೋರ್ಟ್‌ನಗರ, ಇಂಧೋರ, ಮಧ್ಯಪ್ರದೇಶ ಇವರ ಪರವಾಗಿ ದಿನಾಂಕ: 15.2.2003 ರಂದು ವಕೀಲರಾದ ಶ್ರೀ ಎಂ.ಎಲ್. ಮೇಸ್ತ್ರಿರವರು ಅರ್ಜಿ ಸಲ್ಲಿಸಿ ವಾಹನವನ್ನು ತಾತ್ಕಾಲಿಕವಾಗಿ ತಮ್ಮ ವಶಕ್ಕೆ ಬಿಟ್ಟುಕೊಡಬೇಕೆಂದು ಕೋರಿರುತ್ತಾರೆ. ಈ ಪ್ರಾಧಿಕಾರವು ಅರ್ಜಿದಾರರ ಅರ್ಜಿಯನ್ನು ಪರಿಶೀಲಿಸಿ ತನ್ನ ಆದೇಶದ ನಂಬರ್:ಇಎಕ್ಸ್‌ಇ:ಸಿಆರ್‌ಎಂ:15: 2001-02 ಬಿಜಾಪೂರ ದಿನಾಂಕ:20.9.2003ರಲ್ಲಿ ಅರ್ಜಿದಾರರ ಅರ್ಜಿಯನ್ನು ತಿರಸ್ಕರಿಸಿರುತ್ತದೆ. ನಂತರ ಅರ್ಜಿದಾರರು ಮಾನ್ಯ ಸತ್ರ ನ್ಯಾಯಾಲಯ ಬಿಜಾಪೂರವರಲ್ಲಿ ಸದರಿ ಆದೇಶವನ್ನು ಪ್ರಶ್ನಿಸಿದ್ದು, ಮಾನ್ಯ ಸತ್ರ ನ್ಯಾಯಾಲಯವು ದಿನಾಂಕ: 12.12.2003 ರಲ್ಲಿ ಅರ್ಜಿದಾರರಿಗೆ ವಾಹನ ನಂಬರ್:ಎಂಪಿ:09:ಕೆ:9342 ನೇದ್ದನ್ನು ರೂ.10,00,000/- ಇಂಡಮನಿಟಿ ಭಾಂಡ ಪಡೆದುಕೊಂಡು ಬಿಡುಗಡೆ ಮಾಡಲು ಆದೇಶಿಸಿದೆ. ಆದರೆ ಅರ್ಜಿದಾರರು ಇಂಡಮನಿಟಿ ಭಾಂಡನ್ನು ಹಾಜರುಪಡಿಸಿ ತಮ್ಮ ವಾಹನವನ್ನು ಬಿಡಿಸಿಕೊಂಡಿರುವುದಿಲ್ಲಾ.

ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965 ನಿಯಮ 43 (ಬಿ) ಅನ್ವಯ ದಿನಾಂಕ:22.12.2002 ರಂದು ಕಾರಣ ಕೇಳುವ ನೋಟೀಸನ್ನು ನೀಡಲಾಗಿದೆ. ಸದರಿ ನೋಟೀಸಿಗೆ ಅರ್ಜಿದಾರರು ದಿನಾಂಕ:15.2.2003ರಂದು ವಿವರಣೆಯನ್ನು ನೀಡಿ ಸದರಿ ವಿವರಣೆಯಲ್ಲಿ 1ನೇ ಮತ್ತು 2ನೇ ಆರೋಪಿತರು ವಾಹನದ ಬಳಿ ಕೆಲಸಕ್ಕೆ ಇದ್ದರೆಂದು, ಸದರಿ ಲಾರಿಯನ್ನು ಜಪ್ತಿ ಮಾಡಿದ ಮದ್ಯಸಾರದ ಬಗ್ಗೆ ನಿರಾಕರಿಸಿರುತ್ತಾರೆ. ತಾನು ನಿರಪರಾಧಿ ಎಂದು ಮುಂಜಾಗ್ರತೆಯನ್ನು ತೆಗೆದುಕೊಂಡಿರುವುದಾಗಿಯೂ ತಿಳಿಸಿರುತ್ತಾರೆ. ಮತ್ತು ತನ್ನ ಮೇಲಿನ ಆಪಾದನೆಯನ್ನು ನಿರಾಕರಿಸಿದ್ದಾರೆ.

ಪ್ರಾಶಿಕ್ಯೂಶನ ಪರವಾಗಿ ಐದು (5) ಸಾಕ್ಷಿದಾರರ ಸಾಕ್ಷಿಯನ್ನು ಸಹಾಯಕ ಅಭಿಯೋಗ ನಿರ್ದೇಶಕರು ನುಡಿಸಿ, ನಿಶಾನೆ-ಪಿ-1 ರಿಂದಾ 4ನ್ನು ಗುರುತಿಸಿಕೊಂಡಿರುವರು. ಅರ್ಜಿದಾರರ ಪರ ಯಾವುದೇ ಸಾಕ್ಷಿಯನ್ನು ನುಡಿಸಿರುವುದಿಲ್ಲಾ.

ಪ್ರಾಶಿಕ್ಯೂಶನ ಪರ ಸಾಕ್ಷಿ ನುಡಿದ ಫಿರ್ಯಾಧಿದಾರರು ಪ್ರಾ.ಸಾ-2 ತಮ್ಮ ಮುಖ್ಯ ವಿಚಾರಣೆಯಲ್ಲಿ ಸಾಕ್ಷಿ ನುಡಿಯುತ್ತಾ ತಾನು ದಿನಾಂಕ:11.01.2002 ರಿಂದ 23.03.2004ರ ವರೆಗೆ ಸರ್ಕಲ್ ಪೊಲೀಸ್ ಇನ್ಸ್‌ಪೆಕ್ಟರ್, ಶಹರ ವೃತ್ತ ಬಿಜಾಪೂರ ಆಗಿ ಕಾರ್ಯ ನಿರ್ವಹಿಸಿದ್ದೇನೆ. ದಿನಾಂಕ:24.01.2002 ರಂದು ರಾತ್ರಿ 8-00 ಗಂಟೆಯ ಸುಮಾರಿಗೆ ತಾನು ಕಛೇರಿಯಲ್ಲಿ ಇದ್ದಾಗ ಬಿಜಾಪೂರ ಶಹರದ ಹೊರ ವಲಯದಲ್ಲಿರುವ ಕೌಜಲಗಿ ತಾಂಡಾದ ಹತ್ತಿರ ಒಂದು ಸ್ಪಿರೀಟ್ ತುಂಬಿದ ಒಂದು ಟ್ಯಾಂಕರ್ ನಿಂತಿರುತ್ತದೆ ಅಂತಾ ದೊರೆತ ಮಾಹಿತಿಯ ಮೇರೆಗೆ, ತಾನು ಮತ್ತು ತನ್ನ ಸಿಬ್ಬಂದಿಯೊಂದಿಗೆ ತಮ್ಮ ಜೀಪ್‌ನಲ್ಲಿ ಭಾತ್ಮಿ ಬಂದ ಸ್ಥಳದಲ್ಲಿ ಹೋಗಿ ನೋಡಲಾಗಿ ಕೌಜಲಗಿ ತಾಂಡಾದ ಬದಿಗೆ ಇರುವ ಸ್ಥಳದಲ್ಲಿ ಒಂದು ಟ್ಯಾಂಕರ್ ನಂ:ಎಂಪಿ:09:ಕೆ:9342 ನಿಂತಿದ್ದು ತಾವು ಬ್ಯಾಟರಿ ಬೆಳಕಿನಲ್ಲಿ ನೋಡಲಾಗಿ ಅದರಲ್ಲಿ 3 ಜನರು ಇದ್ದರು ಡ್ರೈವರ್ ಕುಳಿತುಕೊಳ್ಳುವ ಸ್ಥಳದಲ್ಲಿ ಟ್ಯಾಂಕರಿನಲ್ಲಿ ಏನಿದೆ ಎಂದು ವಿಚಾರಿಸಲಾಗಿ ಸ್ಪಿರೀಟ್ ಇದೆ ಅಂತಾ ಹೇಳಿದಾ ಆತ ತನ್ನ ಹೆಸರು ಮುಖೇಶಕುಮಾರ ತಂದಿ:ಮಾಂಗಿಲಾಲ ಸಾ।।ರಾಧಾನಗರಿ, ಭೂಪಾಲ, ಮಧ್ಯಪ್ರದೇಶ ಎಂದು ಹೇಳಿದಾ ಸದರಿ ಸ್ಪಿರೀಟ ಸಾಗಿಸಲು ಪರ್ಮಿಟ್ ಹಾಗೂ ಲೈಸನ್ಸ್ ವಗೈರೆ ಕಾಗದ ಪತ್ರಗಳು ಇದೆಯೇ ಅಂತಾ ಪ್ರಶ್ನಿಸಲಾಗಿ ಅದಕ್ಕೆ ಅವರು ಇಲ್ಲವೆಂದು ಹೇಳಿದರು. ಮತ್ತು 2ನೇ ಮನುಷ್ಯನಿಗೆ ವಿಚಾರಿಸಲಾಗಿ ತನ್ನ ಹೆಸರು ಕಿಶೋರ್ ತಂದೆ ಅಂಬಾರಾಮ ಸಾ।।ದೇವಾಸ, ಮಧ್ಯಪ್ರದೇಶ, 2ನೇ ಡ್ರೈವರ್ ಅಂತಾ ಹೇಳಿದನು. 3ನೇ ಮನುಷ್ಯ ತನ್ನ ಹೆಸರು ಪವನಕುಮಾರ ತಂದಿ ರಾಮಸಿಂಗ್

ಸಾ॥ಖಿಂಡುವಾ ಮಧ್ಯಪ್ರದೇಶ ಎಂದು ಮತ್ತು ತಾನು ಟ್ಯಾಂಕರಿನ ಕ್ಲೀನರ್ ಅಂತಾ ಹೇಳಿದನು. ಡ್ರೈವರ ಮುಖೇಶಕುಮಾರ, ಈತನಿಗೆ ಟ್ಯಾಂಕರಿನಲ್ಲಿ ಎಷ್ಟು ಸ್ಪಿರೀಟ್ ಇದೆ ಅಂತಾ ಕೇಳಲಾಗಿ 11,000 ಲೀಟರ್ ಇದೆ ಅಂತಾ ಹೇಳಿದನು ಅಲ್ಲದೇ ಟ್ಯಾಂಕರಿನ ಮಾಲೀಕರು ಶಮಶೇರಸಿಂಗ್ ತಂದೆ:ರಾಮಪಾಲಸಿಂಗ್ ಅಂತಾ ಹೇಳಿದರು. ಆಗ ವೇಳೆ ರಾತ್ರಿ 8-30 ಗಂಟೆ ಆಗಿತ್ತು. ಆಗ ತಾನು 3 ಜನರನ್ನು ದಸ್ತಗಿರಿ ಮಾಡಿ ಸ್ಪಿರೀಟ್ ತುಂಬಿದ ಟ್ಯಾಂಕರ್ ಸಮೇತವಾಗಿ ಗಾಂಧಿಚೌಕ ಪೊಲೀಸ್ ಠಾಣೆಗೆ ಬಂದೆವೆಂದು ಗಾಂಧಿ ಚೌಕ ಪೊಲೀಸ್ ಠಾಣೆಯ ಆವರಣದಲ್ಲಿ ಸದರಿ ಟ್ಯಾಂಕರ್ ನಿಲ್ಲಿಸಿ ಇಬ್ಬರು ಪಂಚರನ್ನು ಹಾಜರುಪಡಿಸಿಕೊಂಡು ಈವರೆಗೆ ನಡೆದ ಮಾಹಿತಿಯನ್ನು ನೀಡಿ ಪಂಚನಾಮೆಯನ್ನು ಜರುಗಿಸಲಾಯಿತೆಂದು, ಪಂಚನಾಮೆಯನ್ನು ರಾತ್ರಿ 9-00 ರಿಂದಾ 10-30 ಗಂಟೆಯವರೆಗೆ ಮುಗಿಸಲಾಯಿತೆಂದು, ಪಂಚನಾಮೆಯ ಅಡಿಯಲ್ಲಿ ಟ್ಯಾಂಕರ್ ಮತ್ತು ಸ್ಪಿರೀಟನ್ನು ಜಪ್ತಿ ಮಾಡಿ ತಾಬಾಕ್ಕೆ ತೆಗೆದುಕೊಳ್ಳಲಾಯಿತು. ಪಂಚನಾಮೆಯ ನಕಲನ್ನು ನೋಡಿ ಅದನ್ನು ಈಗಾಗಲೇ ನಿಶಾನೆ-ಪಿ-1 ಎಂದು ಗುರುತಿಸಲಾಗಿದೆ. ಎಂದು ನಂತರ ಸರ್ಕಾರಿ ತರ್ಫೆ ಪಿರ್ಯಾಧಿದಾರರಾಗಿ ಕಲಂ 32, 34 ಕರ್ನಾಟಕ ಎಕ್ಸೈಜ ಕಾಯ್ದೆಯಡಿಯಲ್ಲಿ ಗಾಂಧಿಚೌಕ ಪೊಲೀಸ್ ಠಾಣೆಯ ಎಸ್.ಎಚ್.ಓ ರವರಿಗೆ ಒಪ್ಪಿಸಿದೆ. ಅದರ ಪ್ರತಿಯನ್ನು ನೋಡಿ ನಿಶಾನೆ-ಪಿ-2 ಎಂದು ತನ್ನ ಸಹಿಯನ್ನು ನಿಶಾನೆ-ಪಿ-2(ಎ) ಎಂದು ಗುರುತಿಸಿಕೊಂಡಿರುವರು ಟ್ಯಾಂಕರನ್ನು ನೋಡಿ ಗುರುತಿಸಿ ಅದನ್ನು ಎಂ.ಓ-1 ಎಂದು ಗುರುತಿಸಲಾಯಿತು. ಶ್ಯಾಂಪಲ್ ಬಾಟಲಿಯನ್ನು ಪಂಚನಾಮೆಯ ಕಾಲಕ್ಕೆ ಬೇರೆ ತೆಗೆಯಲಾಗಿದ್ದು ಅವುಗಳನ್ನು ನೋಡಿದರೆ ಗುರುತಿಸುತ್ತೇನೆ ಎಂದು ವಿವರವಾಗಿ ಸಾಕ್ಷಿ ನುಡಿದಿರುವರು.

ಅರ್ಜಿದಾರರ ಪರ ವಕೀಲರು ಮಾಡಿದ ಪಾಟೀ ಸವಾಲುಗಳಿಗೆ ಉತ್ತರಿಸುತ್ತಾ ಭಾತ್ಮಿ ಬಂದ ಹತ್ತು ನಿಮಿಷದಲ್ಲಿ ಠಾಣೆಯಲ್ಲಿ ಬಿಟ್ಟು ಸ್ಥಳಕ್ಕೆ ಹೋಗುವಷ್ಟರಲ್ಲಿ ರಾತ್ರಿ 8-30 ಗಂಟೆ ಆಗಿತ್ತು. ಅಲ್ಲಿ ಕೌಜಲಗಿ ತಾಂಡಾದ ಜನ ಓಡಾಡುತ್ತಿರಲಿಲ್ಲಾ ಎಂದು ಪಂಚನಾಮೆಗಾಗಿ ಕರೆದ ಪಂಚರಿಬ್ಬರು ತಮ್ಮ ಠಾಣೆಯ ಖಾಯಂ ಪಂಚರಲ್ಲಾ, ಸದರ ಟ್ಯಾಂಕರಿನ ಮಾಲೀಕರು ಶಮಶೇರಸಿಂಗ್ ದಿ:ರಾಮಪಾಲಸಿಂಗ್ ಅಂತಾ ಡ್ರೈವರಿನಿಂದ ತಿಳಿದುಕೊಂಡಿದ್ದು ಸರಿ ಇರುವುದಿಲ್ಲಾ ಅನ್ನುವುದು ಸರಿಯಲ್ಲಾವೆಂದು, ಶಮಶೇರಸಿಂಗ್ ತಂದೆ:ರಸಪಾಲಸಿಂಗ್, ಸದರಿ ಟ್ಯಾಂಕರಿನ ಮಾಲೀಕರು ಅನ್ನುವುದು ಸತ್ಯ. ಆಗ ತಾನು ಸರ್ಚ್ ವಾರೆಂಟ್ ಪಡೆದಿರಲಿಲ್ಲವೆಂದು ಸಾಕ್ಷಿ ನುಡಿದಿರುವರು.

ಪ್ರಾ.ಸಾ-1- ಮಹಮ್ಮದ ಅಲಿ- ಮಾಲು ಜಪ್ತಿ ಪಂಚನಾಮೆಯ ಪಂಚರಿದ್ದು ದಿನಾಂಕ: 12.03.2004 ರಂದು ತಮ್ಮ ಸಾಕ್ಷಿದಲ್ಲಿ ದಿನಾಂಕ:24.01.2002 ರಂದು ಗಾಂಧಿಚೌಕ ಪೊಲೀಸ್ ಠಾಣೆಯವರು ವೃತ್ತ ಪೊಲೀಸ್ ಅಧಿಕಾರಿಗಳಾದ ಶ್ರೀ ಕೋರವಾರ ತನ್ನನ್ನು ಒಂದು ವಾಹನದ ಜಪ್ತಿ ಪಂಚನಾಮೆ ಜರುಗಿಸಲು ಕರೆದಿದ್ದರು. ಗಾಂಧಿಚೌಕ ಪೊಲೀಸ್ ಠಾಣೆಯ ಆವರಣದಲ್ಲಿ ಟ್ಯಾಂಕರ್ ನಂ:ಎಂ.ಪಿ:09:ಕೆ:9342 ಟ್ಯಾಂಕರ್ ನಿಂತಿತ್ತು. ಸದರಿ ಟ್ಯಾಂಕರಿನಲ್ಲಿ 3 ಕಡೆ ಬೂಚು ಮಾಡಿದ್ದು ಅದನ್ನು ತೆಗೆದು ನೋಡಲಾಗಿ ಟ್ಯಾಂಕರಿನ ಒಳಗಡೆ ಸ್ಪಿರೀಟ್ ತುಂಬಿದ್ದು ಡ್ರೈವರ್‌ನಿಗೆ ವಿಚಾರಿಸಲಾಯಿತೆಂದು, ಅದೇ ಟ್ಯಾಂಕರಿನಲ್ಲಿ ಇದ್ದ ಇನ್ನೊಬ್ಬ ವ್ಯಕ್ತಿಗೆ, ಇನ್ನೊಬ್ಬ ಟ್ಯಾಂಕರಿನ ಕ್ಲೀನರ್‌ನಿಗೆ ವಿಚಾರಿಸಲಾಯಿತೆಂದು, ಅಂದಾಜು 11,000 ಲೀಟರ್ ಸ್ಪಿರೀಟ್ ಇದೆ ಅಂತಾ ತಿಳಿಸಿರುತ್ತಾರೆ. ಆಗ ನಿಂತಿದ್ದ ಟ್ಯಾಂಕರ್ ನಂ:ಎಂ.ಪಿ:09:ಕೆ:9342 ಟಾಟಾ ಕಂಪನಿಯದು ನನ್ನ ಸಮಕ್ಷಮ ಪಂಚನಾಮೆ ಬರೆದು 5 ಪ್ರತ್ಯೇಕ ಬಾಟಲಿಗಳಲ್ಲಿ 750 ಮಿಲಿಯ ಶ್ಯಾಂಪಲ್‌ನ್ನು ತೆಗೆದು ಶ್ಯಾಂಪಲ್ ಬಾಟಲಿಗಳಿಗೆ ತನ್ನ ಸಹಿಯನ್ನು ಹಾಕಿರುತ್ತೇನೆ ಎಂದು ಪಂಚನಾಮೆಯನ್ನು ನೋಡಿ ಅದರಲ್ಲಿರುವ ತನ್ನ ಸಹಿಯನ್ನು ತನ್ನದೆಂದು ಗುರುತಿಸಿರುವನು. ಜಪ್ತಿ ಮಾಡಿದ ಟ್ಯಾಂಕರನ್ನು ನೋಡಿ ಅದನ್ನು ಎಂ.ಓ-1 ಎಂದು ಗುರುತಿಸಿ ವಿವರವಾದ ಸಾಕ್ಷಿ ನುಡಿದಿರುವರು. ವಾಹನದ ಮಾಲೀಕರ ಪರ ವಕೀಲರು ಸದರ ಸಾಕ್ಷಿದಾರರನ್ನು ಪಾಟೀ ಸವಾಲು ಮಾಡಿರುವುದಿಲ್ಲಾ.

ಪ್ರಾ.ಸಾ-3 ದಿನಾಂಕ:21.11.2005 ರಂದು ತಮ್ಮ ಸಾಕ್ಷ್ಯದಲ್ಲಿ ತಾನು ಅಬಕಾರಿ ರಕ್ಷಕನಾಗಿ ಕಾರ್ಯನಿರ್ವಹಿಸುತ್ತಿದ್ದೇನೆ ಎಂದು ದಿನಾಂಕ: 17.2.2002 ರಂದು ಅಬಕಾರಿ ಉಪ ನಿರೀಕ್ಷಕರು ಬಿಜಾಪೂರ ನಗರ ಉಪ ವಲಯ ಈ ಪ್ರಕರಣದಲ್ಲಿ ತೆಗೆದ ಮಾದರಿ ಬಾಟಲಿಗಳನ್ನು ರಸಾಯನಿಕ ಪರೀಕ್ಷೆಗಾಗಿ ಬೆಂಗಳೂರಿಗೆ ತೆಗೆದುಕೊಂಡು ಹೋಗಲು ಕೊಟ್ಟರೆಂದು ಅದರನ್ವಯ ಬೆಂಗಳೂರಿಗೆ ಹೋಗಿ ಬಾಟಲಿಗಳನ್ನು ಕಾಗದ ಪತ್ರಗಳನ್ನು ಕಛೇರಿಯಲ್ಲಿ ಕೊಟ್ಟೆವೆಂದು ರಸಾಯನಿಕ ವಿಶ್ಲೇಷಕರು ತಮ್ಮ ವರದಿಯನ್ನು ಕೊಟ್ಟಿದ್ದು ಬಿಜಾಪೂರಕ್ಕೆ ತೆಗೆದುಕೊಂಡು ಬಂದೆನೆಂದು ಅದರ ಪ್ರತಿಯನ್ನು ನೋಡಿ ನಿಶಾನೆ-ಪಿ-3 ಎಂದು ಗುರುತಿಸಿಕೊಂಡಿರುವರು. ಸದರ ಸಾಕ್ಷಿಯನ್ನು ಕೂಡಾ ಅರ್ಜಿದಾರರ ಪರ ವಕೀಲರು ಪ್ರಾಧಿಕಾರದ ಮುಂದೆ ಹಾಜರ್ ಇಲ್ಲದ ಕಾರಣ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಯಿತು.

ಪ್ರಾ.ಸಾ-4 ತನ್ನ ಸಾಕ್ಷಿದಲ್ಲಿ 2002ನೇ ಸಾಲಿನಲ್ಲಿ ತಾನು ಅಬಕಾರಿ ಉಪ ನಿರೀಕ್ಷಕನೆಂದು ಬಿಜಾಪೂರ ಶಹರದ ಉಪ ವಲಯದಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಗಾಂಧಿಚೌಕ ಪೊಲೀಸ್ ಠಾಣಾ ಗುನ್ನೆ ನಂ:15/2002 ರಲ್ಲಿಯ ಜಪ್ತಿ ಮಾಡಿದ ಟ್ಯಾಂಕರ್ ಮತ್ತು ಸುಮಾರು 11,000 ಲೀಟರ್ ಮದ್ಯಸಾರವನ್ನು ಸಂಬಂಧಿಸಿದ ಕಾಗದ ಪತ್ರಗಳನ್ನು ತಮಗೆ ಹಸ್ತಾಂತರಿಸಿದರು ತಾನು ಟ್ಯಾಂಕರಿನಲ್ಲಿ ಮದ್ಯಸಾರದ ಯೋಗ್ಯತೆಯನ್ನು ಪರಿಶೀಲಿಸುವುದಕೋಸ್ಕರ ಮಾದರಿಗಳನ್ನು ತೆಗೆದು ಅಬಕಾರಿ ರಕ್ಷಕರಾದ ಶ್ರೀ ಎಸ್.ಸಿ. ರಾಯಚೂರ ಇವರೊಂದಿಗೆ ಬೆಂಗಳೂರಿಗೆ ಕಳುಹಿಸಿ ಕೊಡಲಾಯಿತೆಂದು ರಸಾಯನಿಕ ತಜ್ಞರ ವರದಿಯನ್ನು ಪಡೆಯಲಾಗಿ, ಸದರ ವರದಿಯಲ್ಲಿ ಮದ್ಯಸಾರದ ಅಂಶವು 67.03 ಓ.ಪಿ. ಇದೆ ಎಂದು ತಿಳಿದುಕೊಳ್ಳಲಾಯಿತೆಂದು, ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ರವರ ಜ್ಞಾಪನಾ ಪತ್ರ ನಂ:ಇಎಕ್ಸ್‌ಇ:ಸಿಆರ್‌ಎಂ:15:2001-02, ದಿನಾಂಕ: 15.3.2002ರ ಪ್ರಕಾರ ಜಪ್ತಿ ಮಾಡಿದ 11,000 ಲೀಟರ್ ಮದ್ಯಸಾರವನ್ನು ಎಂಎಸ್‌ಐಎಲ್ ಕುಷ್ಟಗಿ ಇವರಿಗೆ ಹಂಚಿಕೆ ಮಾಡಿರುತ್ತಾರೆ ಎಂದು, ನಂತರ ಮದ್ಯಸಾರವನ್ನು ಹಸ್ತಾಂತರಿಸಿ ಅವರಿಂದ ರೂ.5,11,896/- ಗಳ ಡಿ.ಡಿಯನ್ನು ಪಡೆದುಕೊಳ್ಳಲಾಯಿತೆಂದು ವಿವರವಾದ ಸಾಕ್ಷಿ ನುಡಿದಿರುವರು ಇವರ ಸಾಕ್ಷಿಯನ್ನು ಕೂಡಾ ಪಾಟೀ ಸವಾಲು ಮಾಡಿರುವುದಿಲ್ಲಾ.

ಪ್ರಾ.ಸಾ-5- ತನ್ನ ಸಾಕ್ಷಿದಲ್ಲಿ ದಿನಾಂಕ: 24.1.2002 ರಂದು ತಾನು ಠಾಣೆಯಲ್ಲಿ ಇದ್ದಾಗ ಪಿರ್ಯಾಧಿದಾರರಾದ ಸರ್ಕಲ್ ಪೊಲೀಸ್ ಇನ್ಸ್‌ಪೆಕ್ಟರ್ ರವರು ಪಿರ್ಯಾಧಿಯನ್ನು ಸಲ್ಲಿಸಿದ ಬಗ್ಗೆ ತದನಂತರ ತಾನು ಮಾಡಿದ ತನಿಖೆಯ ಬಗ್ಗೆ ಸಾಕ್ಷಿ ನುಡಿದಿರುವರು. ಅರ್ಜಿದಾರರ ಪರ ವಕೀಲರು ಪ್ರಾ.ಸಾ-5 ರವರನ್ನು ಪಾಟೀ ಸವಾಲು ಮಾಡಿದ್ದು ಯಾವುದೇ ಮುಖ್ಯವಾದ ಅಂಶವನ್ನು ಈ ಪ್ರಾಧಿಕಾರದ ಗಮನಕ್ಕೆ ತಂದಿರುವುದಿಲ್ಲಾ.

ಅರ್ಜಿದಾರರಿಗೆ ಸಾಕಷ್ಟು ಕಾಲವಕಾಶ ನೀಡಿದರೂ ಕೂಡಾ ಈ ಪ್ರಾಧಿಕಾರದ ಮುಂದೆ ಹಾಜರು ಆಗಿರುವುದಿಲ್ಲಾ. ಸಹಾಯಕ ಅಭಿಯೋಗ ನಿರ್ದೇಶಕರು ತಮ್ಮ ವಿಚಾರಣೆಯನ್ನು ಮುಕ್ತಾಯಗೊಳಿಸಿದರು. ದಿನಾಂಕ:24.11.2005 ರಂದು ಸಹಾಯಕ ಅಭಿಯೋಗ ನಿರ್ದೇಶಕರು ಹಾಗೂ ಅರ್ಜಿದಾರರ ಪರ ವಕೀಲರು ವಾದ-ವಿವಾದಗಳನ್ನು ಆಲಿಸಲಾಯಿತು.

ಪ್ರಾಶ್ಯೂಕೇಶನ್ ಪರ ಸಾಕ್ಷಿ ಹಾಗೂ ಎ.ಡಿ.ಪಿ. ರವರ ವಾದದ ಆಧಾರದ ಮೇಲೆ ಮುಂದಿನ ಆದೇಶ ಹೊರಡಿಸುವ ಮುನ್ನ ಕೆಳಕಂಡ ವಿವಾದಾಂಶಗಳಿಗೆ ಉತ್ತರವನ್ನು ಪಡೆಯಬೇಕಾಗಿರುತ್ತದೆ.

**ಮೊದಲನೆಯ ವಿವಾದಾಂಶ**

ದಿನಾಂಕ:24.1.2002 ರಂದು ಸದರಿ ವಾಹನದಲ್ಲಿ ಅಕ್ರಮವಾಗಿ ಮದ್ಯಸಾರ ಸಾಗಾಣಿಕೆಯಾಗಿದೆಯೇ? ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 32,34 ರೀತ್ಯಾ ಅಪರಾಧವಾಗಿದೆಯೇ? ಅಥವಾ ಇಲ್ಲಾ?

**ಎರಡನೆಯ ವಿವಾದಾಂಶ**

ಸದರಿ ವಾಹನದಲ್ಲಿ ಅಕ್ರಮ ಮದ್ಯಸಾರ ಸಾಗಾಣಿಕೆಯಾಗಿರುವ ಬಗ್ಗೆ ತನ್ನ ತಿಳುವಳಿಕೆಗೆ ಬಾರದೇ ಅಥವಾ ತಾನು ಶಾಮೀಲಾಗದೇ ನಡೆದಿದೆ ಎಂಬುದರ ಬಗ್ಗೆ ಅರ್ಜಿದಾರನಾಗಲೀ ಅಥವಾ ವಾಹನ ಚಾಲಕರಾಗಲೀ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲಾ?

**ಮೂರನೇಯ ವಿವಾದಾಂಶ**

ವಾಹನವು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಿಕ್ಕೆ ಯೋಗ್ಯವಾಗಿದೆಯೇ? ಅಥವಾ ಇಲ್ಲಾ?

**ಮೊದಲನೆಯ ವಿವಾದಾಂಶಕ್ಕೆ ಉತ್ತರ-ಸಕಾರಾತ್ಮಕ (ಹೌದು):**

ಪ್ರಾಶ್ಯೂಕೇಶನ್ ಸಾಕ್ಷಿ ನುಡಿದ ಪಿರ್ಯಾಧಿದಾರರು ನೀಡಿರುವ ಹೇಳಿಕೆಯನ್ನು ಗಮನಿಸಿದಾಗ ಮಹಜರದಲ್ಲಿ ಇರುವ ಅಂಶಗಳನ್ನು ಪ್ರಬಲವಾಗಿ ಸಮರ್ಥಿಸುತ್ತಾರೆ. ಮಾಲು ಜಪ್ತಿ ಪಂಚರು ಹಾಗೂ ಇತರ ಸಾಕ್ಷಿದಾರರು ಸಾಕ್ಷ್ಯಿಯು ಕೂಡಾ ಪಿರ್ಯಾಧಿಯ ಸಾಕ್ಷಿಗೆ ಪೂರಕವಾಗಿದೆ. ಪ್ರಕರಣದಲ್ಲಿ ಆರೋಪಿಸಿರುವ ಅಂಶವಾದ ಸದರಿ ವಾಹನದಲ್ಲಿ ಸಾಗಾಣಿಕೆ ಮಾಡಲ್ಪಟ್ಟಿದ್ದು ಮದ್ಯಸಾರ ಎಂಬುದು ರಸಾಯನಿಕ ವಿಶ್ಲೇಷಣೆಯ ವರದಿಯಿಂದ ದೃಢಪಟ್ಟಿರುತ್ತದೆ. ಸದರಿ ಮದ್ಯಸಾರದ ಸಾಗಾಣಿಕೆಗೆ ಸಂಬಂಧಪಟ್ಟ ದಾಖಲಾತಿಗಳು ವಾಹನದಲ್ಲಿ ಇಲ್ಲದಿರುವ ಅಂಶವನ್ನು ಗಮನಿಸಿದಾಗ ಸದರಿ ವಾಹನದಲ್ಲಿ ಅಕ್ರಮವಾಗಿ ಮದ್ಯಸಾರ ಸಾಗಾಣಿಕೆಯಾಗಿರುವುದು ಸ್ಪಷ್ಟವಾಗಿ ಸಾಬೀತಾಗಿದೆ. ಸದರಿ ವಾಹನದಲ್ಲಿ ಮದ್ಯಸಾರ ಸಾಗಿಸಿದ ಬಗ್ಗೆ ಎದುರುದಾರರಿಂದ ಯಾವುದೇ ರೀತಿಯ ಅಭ್ಯಂತರ ವ್ಯಕ್ತವಾಗಿರುವುದಿಲ್ಲಾ.

**ಎರಡನೆಯ ವಿವಾದಾಂಶಕ್ಕೆ ಉತ್ತರ-ಇಲ್ಲಾ**

ಮೊದಲನೆಯ ವಿವಾದಾಂಶದಿಂದ ಪಡೆದ ಉತ್ತರದಲ್ಲಿ ಸದರಿ ವಾಹನದಲ್ಲಿ ಅಕ್ರಮವಾಗಿ ಮದ್ಯಸಾರ ಸಾಗಾಣಿಕೆಯಾಗಿರುವುದು ಸ್ಪಷ್ಟವಾಗಿ ಸಾಬೀತಾಗಿದ್ದು, ಪ್ರಕರಣವು ಸಂಭವಿಸಿದ ಸಮಯದಲ್ಲಿ ಆರೋಪಿ ವಾಹನದ ಚಾಲಕನ ತಿಳುವಳಿಕೆಯಿಂದ ಹಾಗೂ ಈತನ ಶಾಮೀಲಿನಿಂದಲೇ ಸದರಿ ವಾಹನದಲ್ಲಿ ಅಕ್ರಮ ಮದ್ಯಸಾರ ಸಾಗಾಣಿಕೆಯಾಗಿರುವುದು ಸ್ಪಷ್ಟವಾಗಿ ರುಜುವಾತು ಆಗಿದ್ದು ಇದರ ಬಗ್ಗೆ ವಾಹನದ ಮಾಲೀಕನಿಗೂ ಸಹ ತಿಳುವಳಿಕೆ ಇದ್ದಿತೆಂಬುದು ತಿಳಿದು ಬರುತ್ತದೆ. ವಾಹನದ ಮಾಲೀಕನ ಹಾಗೂ ಚಾಲಕರ ತಿಳುವಳಿಕೆಯಿಂದಲೇ ವಾಹನದಲ್ಲಿ ಅಕ್ರಮವಾಗಿ ಮದ್ಯಸಾರ ಸಾಗಾಣಿಕೆಯಾಗಿರುತ್ತದೆ. ಎಂಬುದು ಸಂದೇಹಾತೀತವಾಗಿ ರುಜುವಾತಾಗಿದೆ. ಇದನ್ನು ಅಲ್ಲಗಳೆಯಲು ಅರ್ಜಿದಾರನು ತನ್ನ ಪರ ಯಾವುದೇ ಸಾಕ್ಷ್ಯಾಧಾರಗಳನ್ನು ನೀಡಿರುವುದಿಲ್ಲಾ.

ನಿಯಮ 43 (ಬಿ) (2) ರನ್ವಯ ಸ್ವತಃ ವಾಹನದ ಮಾಲೀಕ ಅವರ ಪ್ರತಿನಿಧಿ ಮತ್ತು ವಾಹನ ಯಾರ ವಶದಲ್ಲಿತ್ತೋ ಆತನು ವಿವರಗಳು ವಾಹನದಲ್ಲಿ ಮದ್ಯ ಅಥವಾ ಅಮಲಿನ ಪದಾರ್ಥ ಸಾಗಾಣಿಕೆಯಾಗಿರುವುದರ ಬಗ್ಗೆ ತಮ್ಮಗಳ ಗಮನಕ್ಕೆ ಬಾರದೇ ಅಥವಾ ಶಾಮೀಲಾಗದೇ ಈ ಕೃತ್ಯವು ಸಂಭವಿಸಿದೆ. ಮತ್ತು ಇಂತಹ ಉಪಯೋಗದ ವಿರುದ್ಧ ತಾವು ಪ್ರತಿಯೊಬ್ಬರು ಎಲ್ಲ ರೀತಿಯ ಸಕಾರಣವಾದ ಮತ್ತು ಅಗತ್ಯವಾದ ಮಂಜೂರಾತಿಯನ್ನು ತೆಗೆದುಕೊಂಡಿರುವುದರ ಬಗ್ಗೆ ಪ್ರಾಧಿಕೃತ ಅಧಿಕಾರಿಗಳಿಗೆ ತೃಪ್ತಿಕರವಾಗಿ ಸಾಬೀತುಪಡಿಸಬೇಕಾಗಿರುತ್ತದೆ. ಆದರೆ ಅರ್ಜಿದಾರರು ತಮ್ಮ ಹೇಳಿಕೆಯಿಂದಾಗಲೀ ಅಥವಾ ಸಾಕ್ಷಾಧಾರಗಳಿಂದಾಗಲೀ ನೀಡಿರುವುದರಿಂದಾ ತಮ್ಮ ಹೊಣೆಗಾರಿಕೆಯನ್ನು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ಸಾಬೀತುಪಡಿಸಿರುವುದಿಲ್ಲಾ.

ಈ ಪ್ರಕರಣದಲ್ಲಿ ವಾಹನದ ಚಾಲಕರು ಅರ್ಜಿದಾರನಿಂದಲೇ ನೇಮಕ ಮಾಡಲ್ಪಟ್ಟ ಚಾಲಕರು ಆಗಿರುವುದರಿಂದ ಈ ಕೃತ್ಯವು ಪರೋಕ್ಷವಾಗಿ ಅರ್ಜಿದಾರನ ತಿಳುವಳಿಕೆಯಿಂದಲೇ ನಡೆದಿರುವುದು ಸ್ಪಷ್ಟವಾಗಿ ತಿಳಿದು ಬರುತ್ತದೆ.

**ಮೂರನೇ ವಿವಾದಾಂಶಕ್ಕೆ ಉತ್ತರ-ಹೌದು**

ಮೂರನೇ ಮತ್ತು ಎರಡನೆಯ ವಿವಾದಾಂಶದಿಂದ ಪಡೆದ ಉತ್ತರದಿಂದ ಪ್ರಕರಣದಲ್ಲಿ ಜಪ್ತಿ ಮಾಡಲ್ಪಟ್ಟ ವಾಹನವು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿ ಕಂಡು ಬಂದಿರುವುದರಿಂದಾ ಈ ಕೆಳಕಂಡಂತೆ ಆದೇಶ.

**ಆದೇಶ**

ಕೆ.ಆರ್. ಗೌಡ್ರ, ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ. ಬಿಜಾಪೂರ ಜಿಲ್ಲೆ, ಬಿಜಾಪೂರ ಆದ ನಾನು, ಕರ್ನಾಟಕ ಅಬಕಾರಿ ಕಾಯ್ದೆ 1965ರ ನಿಯಮ ಕಲಂ 43(ಎ) ಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ನಿಯಮ 43(ಬಿ)ರ ಅನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ನಂತರ 43 (ಎ) 2 ರನ್ವಯ ಗಾಂಧಿಚೌಕ ಪೊಲೀಸ್ ಠಾಣೆ ಗುನ್ನಾ ನಂಬರ್:15/2002 ರಲ್ಲಿ ಜಪ್ತಿ ಮಾಡಲ್ಪಟ್ಟ ವಾಹನ ನಂಬರ್:ಎಂಪಿ:09:ಕೆ:9342 (ಟ್ಯಾಂಕರ್) ವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿದ್ದೇನೆ.

ಪ್ರಕರಣದಲ್ಲಿ ಜಪ್ತಿ ಮಾಡಿದ 11,000 ಲೀಟರ್ ಮದ್ಯಸಾರವನ್ನು (ರಸಾಯನಿಕ ವಿಶ್ಲೇಷಣೆಗಾಗಿ) ತೆಗೆದ ಶ್ಯಾಂಪಲ್‌ಗಳನ್ನು ಹೊರತುಪಡಿಸಿ ಆಗಿನ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಬಿಜಾಪೂರ ಜಿಲ್ಲೆ ಬಿಜಾಪೂರ ರವರ ಜ್ಞಾಪನಾ ಪತ್ರ ನಂ:ಇಎಕ್ಸ್‌ಇ:ಸಿಆರ್ಎಂ:15:2001-02 ದಿನಾಂಕ:15.3.2002 ಪ್ರಕಾರ ಮದ್ಯಸಾರವನ್ನು ಎಂಎಸ್‌ಐಎಲ್ ಕುಷ್ಟಗಿ ಇವರಿಗೆ ಹಂಚಿಕೆ ಮಾಡಿರುವುದನ್ನು ಈ ಮೂಲಕ ದೃಢಪಡಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:19.12.2005 ರಂದು ಶೀಘ್ರಲಿಪಿಗಾರರಿಗೆ ಉಕ್ತ ಲೇಖನ ಕೊಟ್ಟು ಗಣಕ ಯಂತ್ರದಲ್ಲಿ ಬೆರಳಚ್ಚು ಮಾಡಿದೆ. ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಅಮಲಿನಲ್ಲಿ ಬರುವುದು.

**ಕೆ.ಆರ್. ಗೌಡ್ರ**
ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ಇ.ಐ.ಬಿ. ಬಿಜಾಪೂರ ಜಿಲ್ಲೆ, ಬಿಜಾಪೂರ.

**ಅನುಬಂಧ (1)**

**ಫಿರ್ಯಾಧಿದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

| | | |
|---|---|---|
| ಪ್ರಾ.ಸಾ-1 | ಮಹಮ್ಮದ ಅಲಿ ತಂದಿ ಗುಡುಸಾಬ ಬಿಜಾಪೂರ | ಪಂಚರು |
| ಪ್ರಾ.ಸಾ-2 | ಪರಶುರಾಮ ಅಮೀನಪ್ಪ ಕೋರವಾರ ಸರ್ಕಲ್ ಪೊಲೀಸ್ ಇನ್ಸ್‌ಪೆಕ್ಟರ್ ಬಿಜಾಪೂರ | ತನಿಖಾಧಿಕಾರಿ |

ಶಹರ

| | | |
|---|---|---|
| ಪ್ರಾ.ಸಾ-3 | ಸಂಜೀವಕುಮಾರ ಚಂದ್ರಶೇಖರ<br>ರಾಯಚೂರು ಅಬಕಾರಿ ರಕ್ಷಕ ಜಾರಿ ಮತ್ತು ತನಿಖೆ ಬಿಜಾಪೂರ ತಾಲ್ಲೂಕು | |
| ಪ್ರಾ.ಸಾ-4 | ಇಮಾಮಸಾಹೇಬ ಅಬ್ದುಲರಜಾಕ್ ಬೀಳಗಿ<br>ನಿವೃತ್ತ ಅಬಕಾರಿ ಉಪ ನಿರೀಕ್ಷಕರು ಬಿಜಾಪೂರ | ತನಿಖಾಧಿಕಾರಿ |
| ಪ್ರಾ.ಸಾ-5 | ಅಮೀನಸಾಬ ಮೌಲಾಸಾಬ ನಾಯಕವಾಡಿ<br>ನಿವೃತ್ತ ಪೋಲೀಸ್ ಸಬ್ ಇನ್ಸ್‌ಪೆಕ್ಟರ್<br>ಬಿಜಾಪೂರ | ತನಿಖಾಧಿಕಾರಿ |

ಅನುಬಂಧ(2)

ಫಿರ್ಯಾಧಿದಾರರ ಪರಮಂಡಿಸಲಾದ ದಾಖಲೆಗಳು

| | |
|---|---|
| ನಿಶಾನೆ-ಪಿ-1 | ಪಂಚನಾಮೆ ದೃಢೀಕೃತ ಪತ್ರ |
| ನಿಶಾನೆ-ಪಿ-1(ಎ) | ಪ್ರಾ.ಸಾ-1 ರವರ ಸಹಿ |
| ನಿಶಾನೆ-ಪಿ-2 | ಪಿರ್ಯಾಧಿದಾರರ ವರದಿ |
| ನಿಶಾನೆ-ಪಿ-2(ಎ) | ಪ್ರಾ.ಸಾ-1 ರವರ ಸಹಿ |
| ನಿಶಾನೆ-ಪಿ-3 | ರಸಾಯನಿಕ ತಜ್ಞರ ವರದಿಯ ಪ್ರತಿ |
| ನಿಶಾನೆ-ಪಿ-4 | ಪ್ರಥಮಾನ ವರದಿ |

ಅನುಬಂಧ-(3)

ಫಿರ್ಯಾಧಿದಾರರ ಪರ ಗುರುತಿಸಲಾದ ವಸ್ತುಗಳು

1) ಎಂ.ಓ.-1 ವಾಹನ ನಂಬರ್ ಎಂ.ಪಿ-09-ಕೆ-9342 ಟ್ಯಾಂಕರ್

2) ಎಂ.ಓ.-2 ಮಾದರಿ ಮದ್ಯಸಾರದ ಬಾಟಲಿಗಳು

ಅನುಬಂಧ-(4)

ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು

ಇಲ್ಲಾ

ಅನುಬಂಧ-(5)

ವಾಹನದ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು

-ಇಲ್ಲಾ-

ಕೆ.ಆರ್. ಗೌಡ್ರ

ಪ್ರಾಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,

ಇ.ಐ.ಬಿ. ಬಿಜಾಪೂರ ಜಿಲ್ಲೆ, ಬಿಜಾಪೂರ.

ಪಿ.ಆರ್. 15

## ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೊಂದಣಿ ಪ್ರಾಧಿಕಾರ ಚಿಕ್ಕಮಗಳೂರು ಇವರ ನಡವಳಿ

**ಉಪಸ್ಥಿತರು:** ಶ್ರೀ ಆರ್. ರಾಜಶೇಖರ್
ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೊಂದಣಿ ಪ್ರಾಧಿಕಾರ, ಚಿಕ್ಕಮಗಳೂರು.

**ವಿಷಯ:** ಎಂವೈವೈ-5726 (ಹೆಚ್‌ಜಿವಿ) ಇದರ ನೊಂದಣಿ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:**
1. ಮಾಲೀಕರು ಶ್ರೀ : ದಿ ಚೀಫ್ ಪ್ರಾಜೆಕ್ಟ್ ಆಫೀಸರ್, ಎನ್‌ಎಂಡಿಸಿ, ಕೆ.ಎಂ. ರಸ್ತೆ, ಚಿಕ್ಕಮಗಳೂರು ಇವರ ಅರ್ಜಿ ದಿನಾಂಕ: 28.4.93
2. ಅಧ್ಯರ್ಪಣ ಸಂ: 45:81-82 ದಿ:30.11.81.
3. ಮೋಟಾರು ವಾಹನ ನಿರೀಕ್ಷಕರ ವರದಿ ದಿ:

ಈ ಕಛೇರಿಯ ದಾಖಲೆಗಳಂತೆ ವಾಹನ ಸಂ: ಎಂವೈವೈ-5726 (ಹೆಚ್‌ಜಿವಿ) ಇದರ ನೊಂದಾಯಿತ ಮಾಲೀಕರಾದ ಶ್ರೀ ದಿ ಚೀಫ್ ಪ್ರಾಜೆಕ್ಟ್ ಆಫೀಸರ್ಸ್, ಎನ್ ಎಂ ಡಿ ಸಿ, ಚಿಮರವರು ಸದರಿ ವಾಹನದ ತೆರಿಗೆಯನ್ನು 31.1.1982ರವರೆಗೆ ಪಾವತಿಸಿ ಮುಂದಿನ ತೆರಿಗೆಯಿಂದ ವಿನಾಯಿತಿ ಪಡೆಯಲು ಸದರಿ ವಾಹನದ ಅನುಪಯೋಗದ ಮಾಹಿತಿ ನೀಡಿ ಕಛೇರಿಗೆ ವಾಹನದ ಎಲ್ಲಾ ದಾಖಲೆಗಳನ್ನು ಅಧ್ಯರ್ಪಣ ಸಂ:45:81-82ರಲ್ಲಿ ದಿ:30.11.81 ರಿಂದ ಅಧ್ಯರ್ಪಣ ಮಾಡಿದ್ದು, ಇಂದಿಗೂ ಅಧ್ಯರ್ಪಣ ಮುಂದುವರೆದಿದೆ.

ಕಛೇರಿಗೆ ದಿ:28.4.1993 ರಂದು ಅರ್ಜಿ ಸಲ್ಲಿಸಿ ಈ ವಾಹನವು 1970ರ ಮಾಡೆಲ್ ಆಗಿದ್ದು ರಸ್ತೆಯಲ್ಲಿ ಓಡಿಸಲು ಅನರ್ಹವಿರುವುದಾಗಿ ಮಾಹಿತಿ ನೀಡಿ ನೊಂದಣಿ ರದ್ದುಪಡಿಸಲು ಕೋರಿರುತ್ತಾರೆ. ಅದರಂತೆ ನೊಂದಣಿ ರದ್ದುಪಡಿಸಲು ಈ ಕೆಳಗಿನಂತೆ ಆದೇಶ ಮಾಡಿದೆ.

### ಆದೇಶ ಸಂ: ಪ್ರಾಸಾಅ:ಚಿಮ:ಎಫ್‌ಟಿ: ಸಾರಿಗೆ:05-06, ದಿನಾಂಕ: 5ನೇ ಡಿಸೆಂಬರ್ 2005

ಕೇಂದ್ರ ಮೋಟಾರು ವಾಹನ ಕಾಯಿದೆ, 1988ರ ಕಲಂ 55ರಲ್ಲಿ ದತ್ತವಾದ ಅಧಿಕಾರದ ಮೇರೆಗೆ ಶ್ರೀ ಆರ್. ರಾಜಶೇಖರ್, ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೊಂದಣಿ ಪ್ರಾಧಿಕಾರ, ಚಿಕ್ಕಮಗಳೂರು ಆದ ನಾನು ವಾಹನ ಸಂ: ಎಂವೈವೈ-5726 (ಹೆಚ್‌ಜಿವಿ) ವಾಹನದ ನೊಂದಣಿ ಹಾಗೂ ನೊಂದಣಿ ಪತ್ರವನ್ನು ಸದರಿ ವಾಹನದ ಮೇಲೆ ಮುಂದೆ ಲೆಕ್ಕ ಪರಿಶೋಧನೆಯಿಂದ ಬರಬೇಕಾದ ಬಾಕಿ ಏನಾದರೂ ಕಂಡುಬಂದಲ್ಲಿ ವಾಹನದ ಮಾಲೀಕರು ಪಾವತಿಸಲು ಬದ್ದರಿರುತ್ತಾರೆಂಬ ಷರತ್ತಿನ ಮೇಲೆ ನೊಂದಣಿಯನ್ನು ರದ್ದುಪಡಿಸಿರುತ್ತೇನೆ.

### ವಾಹನದ ವಿವರಗಳು

| | | | |
|---|---|---|---|
| 1. | ವಾಹನ ಸಂ | : | ಎಂವೈವೈ-5726 |
| 2. | ವರ್ಗ | : | ಹೆಚ್‌ಜಿವಿ |

| | | | |
|---|---|---|---|
| 3. | ಮಾಡೆಲ್ | : | 1970 |
| 4. | ತಯಾರಿಕೆ | : | |
| 5. | ಚಾಸಿಸ್ ಸಂ | : | 312 056 9607490 |
| 6. | ಯಂತ್ರ ಸಂ | : | 312 915 960 7705 |
| 7. | ತೆರಿಗೆ ಪಾವತಿ | : | 31.1.82 |
| 8. | ಹೆಚ್.ಪಿ.ಎ | : | ಇರುವುದಿಲ್ಲ. |
| 9. | ನೊಂದಣಿ ದಿ: | : | - |
| 10. | ಎಸ್.ಆರ್. ಸಂ: | : | 45:81-82 |
| 11. | ಮಾಲೀಕರು | : | ಶ್ರೀ ದಿ ಚೀಫ್ ಪ್ರಾಜೆಕ್ಟ್ ಆಫೀಸರ್, ಎನ್ ಎಂಡಿಸಿ, ಕೆ.ಎಂ. ರಸ್ತೆ, ಚಿಕ್ಕಮಗಳೂರು. |

**ಆರ್. ರಾಜಶೇಖರ್**

ಪಿ.ಆರ್. 18 ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೊಂದಣಿ ಪ್ರಾಧಿಕಾರ, ಚಿಕ್ಕಮಗಳೂರು.

## ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೊಂದಣಿ ಪ್ರಾಧಿಕಾರ ಚಿಕ್ಕಮಗಳೂರು ಇವರ ನಡವಳಿ

**ಉಪಸ್ಥಿತರು:** ಶ್ರೀ ಆರ್. ರಾಜಶೇಖರ್

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೊಂದಣಿ ಪ್ರಾಧಿಕಾರ, ಚಿಕ್ಕಮಗಳೂರು.

**ವಿಷಯ:** ಕೆಎ-14:232 (ಹೆಚ್‌ಜಿವಿ) ಇದರ ನೊಂದಣಿ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** 1. ವಾಹನ ಮಾಲೀಕರು ಶ್ರೀ ಅಶೋಕ್ ಕುಮಾರ್, ಕಡೂರು ಇವರ ಅರ್ಜಿ ದಿನಾಂಕ: 28.11.05

ವಾಹನ ಸಂ: ಕೆಎ-14:232 (ಹೆಚ್‌ಜಿವಿ) ವಾಹನದ ನೊಂದಾಯಿತ ಮಾಲೀಕರಾದ ಶ್ರೀ ಅಶೋಕ್ ಕುಮಾರ್, ಕಡೂರು ಇವರು ಸದರಿ ವಾಹನದ ತೆರಿಗೆಯನ್ನು ದಿನಾಂಕ: 30.11.05 ರವರೆಗೆ ಪಾವತಿಸಿದ್ದೀರಿ. ದಿ.28.11.05 ರಂದು ಕಛೇರಿಗೆ ಸದರಿ ವಾಹನದ ಎಲ್ಲಾ ದಾಖಲೆಗಳೊಂದಿಗೆ ಅರ್ಜಿ ನೀಡಿ ಈ ವಾಹನವು ಈಗ ಹಳೆಯದಾಗಿದ್ದು, ರಸ್ತೆಯಲ್ಲಿ ಓಡಿಸಲು ಅನರ್ಹವಾಗಿರುವುದರಿಂದ ಹಾಗೂ ದುರಸ್ಥಿ ದುಬಾರಿ ಆಗಿರುವುದರಿಂದ ನೊಂದಣಿ ರದ್ದುಪಡಿಸಬೇಕೆಂದು ಕೋರಿಕೆ ಸಲ್ಲಿಸಿರುತ್ತಾರೆ. ಮಾಲೀಕರ ಕೋರಿಕೆಯಂತೆ ಈ ವಾಹನದ ನೊಂದಣಿ ರದ್ದುಪಡಿಸಲು ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

### ಆದೇಶ ಸಂ: ಪ್ರಾಸಾಅ:ಚಿಮ:ಎಫ್‌ಟಿ:ಸಾರಿಗೆ:05-06, ದಿನಾಂಕ: 28ನೇ ನವೆಂಬರ್ 2005

ಕೇಂದ್ರ ಮೋಟಾರು ವಾಹನ ಕಾಯಿದೆ, 1988ರ ಕಲಂ 55ರಲ್ಲಿ ದತ್ತವಾದ ಅಧಿಕಾರದ ಮೇರೆಗೆ ಶ್ರೀ ಆರ್. ರಾಜಶೇಖರ್, ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೊಂದಣಿ ಪ್ರಾಧಿಕಾರ, ಚಿಕ್ಕಮಗಳೂರು ಆದ ನಾನು, ವಾಹನ ಸಂ: ಕೆಎ-14:232 (ಹೆಚ್‌ಜಿವಿ) ಘನ ಸರಕು ವಾಹನದ ನೊಂದಣಿ ಹಾಗೂ ನೊಂದಣಿ ಪತ್ರವನ್ನು ಸದರಿ ವಾಹನದ ಮೇಲೆ ಮುಂದೆ ಲೆಕ್ಕ ಪರಿಶೋಧನೆಯಿಂದ ಬರಬೇಕಾದ ಬಾಕಿ ಏನಾದರೂ ಕಂಡುಬಂದಲ್ಲಿ ವಾಹನದ ಮಾಲೀಕರು ಪಾವತಿಸಲು ಬದ್ದರಿರುತ್ತಾರೆಂಬ ಷರತ್ತಿನ ಮೇಲೆ ನೊಂದಣಿಯನ್ನು ರದ್ದುಪಡಿಸಿರುತ್ತೇನೆ.

**ವಾಹನದ ವಿವರಗಳು**

| | | | |
|---|---|---|---|
| 1. | ವಾಹನ ಸಂ | : | ಕೆಎ-14:232 |
| 2. | ವರ್ಗ | : | ಘನ ಸರಕು ವಾಹನ |
| 3. | ಚಾಸಿಸ್ ಸಂ | : | 344 052334861 |
| 4. | ಇಂಜಿನ್ ಸಂ | : | 692 ಡಿ 02 344 953 |
| 5. | ಮಾಡೆಲ್ ಸಂ | : | 1990 |
| 6. | ಹೆಚ್ ಪಿ ಎ | : | ಇರುವುದಿಲ್ಲ. |
| 7. | ಮಾಲೀಕರು | : | ಶ್ರೀ ಅಶೋಕ್ ಕುಮಾರ್ ಬಿನ್ ಕೀವ್‌ರಾಜ್, ಕೆ.ಎಂ. ರಸ್ತೆ, ಕಡೂರು, ಚಿಕ್ಕಮಗಳೂರು |

**ಆರ್. ರಾಜಶೇಖರ್**

ಪಿ.ಆರ್. 19 ನೊಂದಣಿ ಪ್ರಾಧಿಕಾರ ಮತ್ತು ಪ್ರಾದೇಶಿಕ ಸಾರಿಗೆ ಪ್ರಾಧಿಕಾರ, ಚಿಕ್ಕಮಗಳೂರು.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

### ಅಧಿಸೂಚನೆ ಸಂಖ್ಯೆ: ಆಕುಕ 103 ಎಂಎಸ್‌ಎಫ್ 2005, ಬೆಂಗಳೂರು, ದಿನಾಂಕ: 6ನೇ ಡಿಸೆಂಬರ್ 2005

ದಿ: 18.10.2005 ಸಂಖ್ಯೆ: ಆಕುಕ 103 ಎಂಎಸ್‌ಎಫ್ 2005ರ ಅಧಿಸೂಚನೆಯಲ್ಲಿ ಬೆಂಗಳೂರು ವೈದ್ಯಕೀಯ ಕಾಲೇಜಿನ ಶಸ್ತ್ರಚಿಕಿತ್ಸಾಶಾಸ್ತ್ರ ಪ್ರಾಧ್ಯಾಪಕ ಡಾ: ಟಿ. ದುರ್ಗಣ್ಣರವರನ್ನು ಮೈಸೂರು ವೈದ್ಯಕೀಯ ಕಾಲೇಜಿನ ಶಸ್ತ್ರಚಿಕಿತ್ಸಾಶಾಸ್ತ್ರ ಪ್ರಾಧ್ಯಾಪಕರ ಹುದ್ದೆಯಲ್ಲಿ ನಿವೃತ್ತರಾದ ಡಾ: ಕೆ.ಆರ್. ಗಣಪತಿ ರವರ ಸ್ಥಾನದಲ್ಲಿ ನೇಮಿಸಿರುವುದನ್ನು ಸರ್ಕಾರದ ಮುಂದಿನ ಆದೇಶದವರೆಗೆ ತಡೆಹಿಡಿಯಲಾಗಿದೆ (Abeyance).

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಕುಮಾರ್**

ಪಿ.ಆರ್. 20 ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

### ಅಧಿಸೂಚನೆ

### ಸಂಖ್ಯೆ: ಸಿಆಸುಇ 69 ಸಅಸೇ 2005, ಬೆಂಗಳೂರು, ದಿನಾಂಕ: 17ನೇ ಡಿಸೆಂಬರ್ 2005

ಕರ್ನಾಟಕ ಸರ್ಕಾರ ಸಚಿವಾಲಯದ ಅಧೀನ ಕಾರ್ಯದರ್ಶಿ ಹುದ್ದೆಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 32 ರಡಿ ಸ್ವತಂತ್ರ ಪ್ರಭಾರದ ಮೇರೆಗೆ ಕಾರ್ಯನಿರ್ವಹಿಸುತ್ತಿರುವ ಈ ಕೆಳಕಂಡ ಶಾಖಾಧಿಕಾರಿಗಳಿಗೆ ಕರ್ನಾಟಕ ನಾಗರೀಕ ಸೇವಾ (ಬಡ್ತಿ, ವೇತನ ಹಾಗೂ

ಪಿಂಚಣಿಗಳ ಕ್ರಮಬದ್ಧತೆ) ನಿಯಮಗಳು 1978ರ ನಿಯಮ 2 (3)ರ ಅನ್ವಯ ಕಾಲಂ (3)ರಲ್ಲಿ ಅವರ ಹೆಸರುಗಳ ಮುಂದೆ ಸೂಚಿಸಿರುವ ದಿನಾಂಕಗಳಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ವೇತನ ಶ್ರೇಣಿ ರೂ. 7400-200-8800-260-10880-320-13120ರ ಸರ್ಕಾರದ ಅಧೀನ ಕಾರ್ಯದರ್ಶಿ ಹುದ್ದೆಗಳಲ್ಲಿ ಸ್ಥಾನಪನ್ನ ಬಡ್ತಿ ನೀಡಿ ಪ್ರಸ್ತುತ ಅವರುಗಳು ಕಾರ್ಯನಿರ್ವಹಿಸುತ್ತಿರುವ ಹುದ್ದೆಗಳಲ್ಲಿಯೇ ಮುಂದುವರೆಸಲಾಗಿದೆ.

| ಕ್ರ. ಸಂ. | ಅಧೀನ ಕಾರ್ಯದರ್ಶಿ ಹೆಸರು ಮತ್ತು ಇಲಾಖೆ **ಶ್ರೀ : ಶ್ರೀಮತಿ** | ಸ್ಥಾನಪನ್ನ ಆಧಾರದ ಮೇರೆಗೆ ನಿಯತಗೊಳಿಸಿದ ದಿನಾಂಕ |
|---|---|---|
| 1. | ಕೆ.ಆರ್. ದತ್ತಾತ್ರೇಯ<br>ಕಂದಾಯ ಇಲಾಖೆ (ದಿ: 30.4.04 ರಂದು ವಯೋನಿವೃತ್ತಿ ಹೊಂದಿರುತ್ತಾರೆ) | 05.03.2004 |
| 2. | ಎಂ.ಎನ್. ಮಂಜುನಾಥ್<br>ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ) | 05.03.2004 |
| 3. | ಆರ್. ನಿರ್ಮಲ<br>ಕಂದಾಯ ಇಲಾಖೆ (ದಿ: 31.5.05 ರಂದು ಸ್ವಯಂ ನಿವೃತ್ತಿ ಹೊಂದಿರುತ್ತಾರೆ) | 05.03.2004 |
| 4. | ಎ.ಎನ್. ಶಾಂತಕುಮಾರಿ<br>ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ | 05.03.2004 |
| 5. | ಎಲ್. ರಾಜೇಶ್ವರಿ<br>ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ | 05.03.2004 |
| 6. | ಬಿ.ಎನ್. ಈಶ್ವರ್‌ಪ್ರಸಾದ್<br>ಕಾನೂನು ಇಲಾಖೆ (ದಿ: 31.5.05 ರಂದು ವಯೋ ನಿವೃತ್ತಿ ಹೊಂದಿರುತ್ತಾರೆ) | 31.03.2004 |
| 7. | ಪಿ. ಕೋಕಿಲ<br>ವಾ.ಪ್ರ.ಯು.ಸೇ.ಇಲಾಖೆ (ದಿ: 31.1.05 ರಂದು ವಯೋ ನಿವೃತ್ತಿ ಹೊಂದಿರುತ್ತಾರೆ) | 31.03.2004 |
| 8. | ಜಿ. ಪಾಪಯ್ಯರಾಜು<br>ಶಿಕ್ಷಣ ಇಲಾಖೆ (ದಿ: 2.5.05 ರಂದು ಸ್ವಯಂ ನಿವೃತ್ತಿ ಹೊಂದಿರುತ್ತಾರೆ) | 31.03.2004 |
| 9. | ಹೆಚ್. ಹನುಮಂತಯ್ಯ<br>ವಸತಿ ಇಲಾಖೆ | 31.03.2004 |
| 10. | ಬಿ.ಎಲ್. ಶಿವಕುಮಾರ್<br>ಸಿ.ಆ.ಸು.ಇಲಾಖೆ (ರಾಜಕೀಯ) (ದಿ: 31.10.04 ರಂದು ವಯೋ ನಿವೃತ್ತಿ ಹೊಂದಿರುತ್ತಾರೆ) | 28.10.2004 |
| 11. | ಎಸ್.ಜಿ. ನಾರಾಯಣ<br>ಆರ್ಥಿಕ ಇಲಾಖೆ | 28.10.2004 |
| 12. | ವೈ.ಎನ್. ಕಪಿಲ<br>ಸುಜಲ ಜಲಾನಯನ ಅಭಿವೃದ್ಧಿ ಯೋಜನೆ ಕೃ. ಮತ್ತು ತೋ. ಇಲಾಖೆ (ದಿ: 31.12.04 ರಂದು ವಯೋ ನಿವೃತ್ತಿ ಹೊಂದಿರುತ್ತಾರೆ) | 28.10.2004 |
| 13. | ಬಿ.ಎಂ. ಲಕ್ಷ್ಮೀನಾರಾಯಣ<br>ಲೋಕೋಪಯೋಗಿ ಇಲಾಖೆ (ಸೇ-ಎ) | 28.10.2004 |
| 14. | ಬಿ. ವಾಸುದೇವ<br>ಒಳಾಡಳಿತ ಮತ್ತು ಸಾರಿಗೆ ಇಲಾಖೆ (ಸಾರಿಗೆ) (ದಿ: 31.7.05 ರಂದು ವಯೋ ನಿವೃತ್ತಿ ಹೊಂದಿರುತ್ತಾರೆ) | 28.10.2004 |
| 15. | ಎನ್.ಎ. ಮಾರ್ಗರೇಟ್<br>ಕಂದಾಯ ಇಲಾಖೆ | 28.10.2004 |
| 16. | ಕೆ. ನರಸಿಂಹಮೂರ್ತಿ<br>ಕಂದಾಯ ಇಲಾಖೆ (ದಿ: 31.5.05 ರಂದು ವಯೋ ನಿವೃತ್ತಿ ಹೊಂದಿರುತ್ತಾರೆ) | 28.10.2004 |
| 17. | ವೈ.ಜೆ. ಅಗರ್‌ಖೇಡ್<br>ಸಿ.ಆ.ಸು.ಇಲಾಖೆ (ಆಡಳಿತ-2) | 28.10.2004 |
| 18. | ಕೆ. ಮೊಹಮ್ಮದ್ ಆಲಂ<br>ಸಿ.ಆ.ಸು.ಇಲಾಖೆ (ರಾಜಕೀಯ) | 08.11.2004 |
| 19. | ಬಿ.ಎನ್. ಲಕ್ಷ್ಮಿ<br>ಯೋಜನಾ ಇಲಾಖೆ | 08.11.2004 |
| 20. | ಎಂ.ಎಸ್. ರುಕ್ಕೋಜಿರಾವ್<br>ತಹಶೀಲ್ದಾರ್, ಬಾಗಲಕೋಟೆ (31.8.05 ರಂದು ವಯೋ ನಿವೃತ್ತಿ ಹೊಂದಿರುತ್ತಾರೆ) | 03.01.2005 |
| 21. | ಸಗುಣಾಬಾಯಿ,<br>ಸಿ.ಆ.ಸು.ಇಲಾಖೆ (ಜನಸ್ಪಂದನಾ ಕೋಶ) | 03.01.2005 |

| ಕ್ರ. ಸಂ. | ಅಧೀನ ಕಾರ್ಯದರ್ಶಿ ಹೆಸರು ಮತ್ತು ಇಲಾಖೆ<br>ಶ್ರೀ : ಶ್ರೀಮತಿ | ಸ್ಥಾನಪನ್ನ ಆಧಾರದ ಮೇರೆಗೆ ನಿಯತಗೊಳಿಸಿದ ದಿನಾಂಕ |
|---|---|---|
| 22. | ಎಸ್. ಚಂದ್ರಶೇಖರರಾವ್<br>ಶಿಕ್ಷಣ ಇಲಾಖೆ (ಕಾ.ಕೋ) | 03.01.2005 |
| 23. | ಸಿ.ಡಿ. ನಾಗರಾಜು<br>ಯೋಜನಾ ಇಲಾಖೆ (ದಿ: 31.1.05 ರಂದು ವಯೋ ನಿವೃತ್ತಿ ಹೊಂದಿರುತ್ತಾರೆ) | 03.01.2005 |
| 24. | ಎಸ್.ಆರ್. ಶಂಕರ್<br>ಆ.ಕು.ಕ. ಇಲಾಖೆ | 03.01.2005 |
| 25. | ಬಿ. ದೇವಿಕ<br>ವಾ. ಮತ್ತು ಕೈ. ಇಲಾಖೆ | 03.01.2005 |
| 26. | ಹೆಚ್. ಚಂದ್ರಪ್ರಭ<br>ಸಿ.ಆ.ಸು.ಇಲಾಖೆ (ಕಾ.ಕೋ) | 03.01.2005 |
| 27. | ಎ. ತಾರ್ಸಿಸ್ ರಾಜಾಸಿಂಗ್<br>ಡಿ.ಡಿ.ಪಿ.ಇ.ಆರ್ (ದಿ: 31.7.05 ರಂದು ವಯೋ ನಿವೃತ್ತಿ ಹೊಂದಿರುತ್ತಾರೆ) | 03.01.2005 |
| 28. | ವಿ.ಪಿ. ಕೆರಿಮತ್<br>ವಿಶೇಷ ಭೂಸ್ವಾಧೀನಾಧಿಕಾರಿ, ಕೃಷ್ಣಾ ಮೇಲ್ದಂಡೆ ಯೋಜನೆ, ಇಂಡಿ | 03.01.2005 |
| 29. | ಆರ್.ಎ. ಕುಲಕರ್ಣಿ<br>ಒಳಾಡಳಿತ ಇಲಾಖೆ | 03.01.2005 |
| 30. | ಡಿ.ಪಿ. ಮುರುಡಿ<br>ಆರ್ಥಿಕ ಇಲಾಖೆ | 03.01.2005 |
| 31. | ಜಿ.ಎಸ್. ಗುರುಸಿದ್ದಯ್ಯ<br>ಕಂದಾಯ ಇಲಾಖೆ (ವಿಶೇಷ ಕೋಶ) | 03.01.2005 |
| 32. | ನಂಜುಂಡಪ್ಪ<br>ಸಹಕಾರ ಇಲಾಖೆ (ಕಾ.ಕೋ) | 03.01.2005 |
| 33. | ಎನ್. ವೆಂಕಟಾಚಲಪತಿ<br>ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ | 03.01.2005 |
| 34. | ಎಸ್.ಬಿ. ಕೃಷ್ಣಪ್ಪನವರ್<br>ಇಂಧನ ಇಲಾಖೆ | 03.01.2005 |
| 35. | ಎಸ್.ಸಿ. ಸುಂದ್ರ<br>ಗ್ರಾ.ಅ. ಮತ್ತು ಪಂ.ರಾಜ್ ಇಲಾಖೆ | 01.02.2005 |
| 36. | ಆರ್. ಶಿವಲಿಂಗಯ್ಯ<br>ಯೋಜನಾ ಇಲಾಖೆ | 01.02.2005 |
| 37. | ಈ. ರಾಮಕೃಷ್ಣಪ್ಪ, ತಹಶೀಲ್ದಾರ್,<br>ಕೊರಟಗೆರೆ | 01.02.2005 |
| 38. | ಹೆಚ್.ಎಂ. ಮಲ್ಲಿಕಾರ್ಜುನಸ್ವಾಮಿ<br>ಅ.ಪ.ಜೀ. ಇಲಾಖೆ | 01.02.2005 |
| 39. | ಕೆ. ನಾಗೇಶ್<br>ಸಿ.ಆ.ಸು.ಇಲಾಖೆ (ಲೆಕ್ಕಪತ್ರ-ಐಆರ್ಎಲ್ಎ) | 11.03.2005 |
| 40. | ಎಸ್.ಜಿ. ಸಂಪತ್ ಕುಮಾರ್<br>ನಗರಾಭಿವೃದ್ಧಿ ಇಲಾಖೆ | 11.03.2005 |
| 41. | ಹೆಚ್. ಶೇಖರಪ್ಪ<br>ಸಮಾಜ ಕಲ್ಯಾಣ ಇಲಾಖೆ | 11.03.2005 |
| 42. | ಸ್ವರ್ಣಲತ ಎಂ.ಭಂಡಾರೆ<br>ಶಿಕ್ಷಣ ಇಲಾಖೆ | 11.03.2005 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 21

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

## ನಗರಾಭಿವೃದ್ಧಿ ಇಲಾಖೆ

### ಅಧಿಸೂಚನೆ

**ಸಂಖ್ಯೆ:ನಅಇ.121.ನಯೋಸೇ.2005, ಬೆಂಗಳೂರು, ದಿನಾಂಕ: 21ನೇ ಡಿಸೆಂಬರ್ 2005**

ಶ್ರೀ ಎಚ್.ಆರ್. ವಿಶ್ವನಾಥ್, ಕಿರಿಯ ನಗರ ಯೋಜಕ, ಇವರು ಮರುನೇಮಕಾತಿಗಾಗಿ ಕಾಯ್ದ ಅವಧಿ ದಿನಾಂಕ:24.6.2005 ರಿಂದ 20.7.2005ರವರೆಗಿನ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 8(15) (ಎಫ್) ರನ್ವಯ ಕಡ್ಡಾಯ ನಿರೀಕ್ಷಣಾ ಅವಧಿಯೆಂದು ಪರಿಗಣಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ರಂಗನಾಥ್**

ಪಿ.ಆರ್. 22

ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

## ಉಪ ನಿರ್ದೇಶಕರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಚಾಮರಾಜನಗರ ಜಿಲ್ಲೆ, ಚಾಮರಾಜನಗರ

### ಪ್ರಕಟಣೆ

2005-06ನೇ ಸಾಲಿನ ಸರ್ಕಾರಿ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿ ಅಧಿಸೂಚನೆ ಮತ್ತು ಅರ್ಜಿ ಸಹಿತ ಮಾಹಿತಿ ಪುಸ್ತಕ ಅಧ್ಯಾಯ-2ರ ಪುಟ ಸಂಖ್ಯೆ 14ರ 6(1)(ಎ)(3)ರ ಮೀಸಲಾತಿಯನ್ನು ಶಿಕ್ಷಕರ ನೇಮಕಾತಿಗೆ ಅವಕಾಶವಿಲ್ಲವೆಂದು "ಹಿಂತೆಗೆದುಕೊಳ್ಳಲಾಗಿದೆ"

6) ಪ್ರತಿ ಪ್ರವರ್ಗದಲ್ಲಿ ವಿವಿಧ ಗುಂಪುಗಳಿಗೆ ಮೀಸಲಾತಿ ಪ್ರಮಾಣ

1. ಅಂಗವಿಕಲ ಗುಂಪಿಗೆ ಕೆಳಗಿನವರು ಶಿಕ್ಷಕರ ನೇಮಕಾತಿಗೆ ಅರ್ಹರಾಗುತ್ತಾರೆ.

ವಿವರಣೆ: ಅಂಗವಿಕಲ ಅಭ್ಯರ್ಥಿ ಎಂದರೆ (ಎ) 1 ಕಣ್ಣಿನ ದೃಷ್ಟಿಯನ್ನು ಸರಿಪಡಿಸುವ ಕನ್ನಡಕವನ್ನು ಹಾಕಿದಾಗ ಎರಡೂ ಕಣ್ಣಿನ ಪೈಕಿ ಉತ್ತಮವಾದ ಕಣ್ಣಿನಲ್ಲಿ 6:60 ಅಥವಾ 20:2000 (ಸ್ನಲನ್) ಮೀರದಿರುವ ದೃಷ್ಠಿ ಸಾಮರ್ಥ್ಯ ಇರುವ ವ್ಯಕ್ತಿ.

ಅಥವಾ

2. 20 ಡಿಗ್ರಿಗಳು ಅಥವಾ ಅದಕ್ಕೂ ಕಡಿಮೆಯ ಕೋನದವರೆ ವಿಸ್ತರಿಸುವ ದೃಷ್ಠಿ ಕ್ಷೇತ್ರದ ಪರಿಮಿತಿಯನ್ನು ಹೊಂದಿರುವ ವ್ಯಕ್ತಿ.
3. ಸಂಪೂರ್ಣವಾಗಿ ದೃಷ್ಠಿ ಸಾಮರ್ಥ್ಯವನ್ನು ಕಳೆದು ಕೊಂಡಿರುವ ವ್ಯಕ್ತಿಯು ಶಿಕ್ಷಕರ ನೇಮಕಾತಿಗೆ ಪರಿಗಣಿಸಲಾಗುವುದಿಲ್ಲ.

ಆಯ್ಕೆ ಪ್ರಾಧಿಕಾರಿ ಹಾಗೂ ಉಪನಿರ್ದೇಶಕರು (ಆಡಳಿತ)

ಪಿ.ಆರ್. 23

ಸಾರ್ವಜನಿಕ ಶಿಕ್ಷಣ ಇಲಾಖೆ, ಚಾಮರಾಜನಗರ ಜಿಲ್ಲೆ.

## ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ., ಕೊಡಗು ಜಿಲ್ಲೆ, ಮಡಿಕೇರಿ ರವರ ಕಛೇರಿ ನಡವಳಿಗಳು

**ಉಪಸ್ಥಿತರು:** ಎನ್.ಎಂ. ಹುಸೇನ್,
ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು ವಿಚಕ್ಷಣದಳ (ಇಐಬಿ),
ಕೊಡಗು ಜಿಲ್ಲೆ, ಮಡಿಕೇರಿ.

| **ಫಿರ್ಯಾದುದಾರರು** | **ವಿರುದ್ಧ** | **ಅಪರಾಧಿಗಳು** |
|---|---|---|
| ಅಬಕಾರಿ ಉಪ ನಿರೀಕ್ಷಕರು<br>ಸಂ:1, ಜಾರಿ ಮತ್ತು ತನಿಖೆ ಮಡಿಕೇರಿ ತಾಲ್ಲೂಕು | | 1. ವಡೇಕಲ್ ಬಾಬುರಾಜ್ (ಚಾಲಕ) ತಂದೆ ಶಂಕರರಾವ್, ಕೆದುರೂರು ಗ್ರಾಮ ಮತ್ತು ಅಂಚೆ, ತಲಚೇರಿ, ಕಣ್ಣೂರು ಜಿಲ್ಲೆ, ಕೇರಳ ರಾಜ್ಯ.<br>2. ವಿಜಯನ್ ವಿ. ತಂದೆ ಆರ್ಚಾಮಿ, ಕೂಳಿಜಂಬಾರ, ಎರ್ತಂಪಡಿ ಅಂಚೆ, ಚಿಟ್ಟೂರು ತಾ||, ಪಾಲಿಕ್ಕಾಡ್ ಜಿಲ್ಲೆ. ಕೇರಳ ರಾಜ್ಯ. |

**ಪ್ರಕರಣದ ಮುಖ್ಯಾಂಶಗಳು**

ದಿ:8.10.05 ರಂದು ರಾತ್ರಿ 11.00 ಗಂಟೆ ಸಮಯದಲ್ಲಿ ಮಡಿಕೇರಿ ತಾಲ್ಲೂಕು ಜಾರಿ ಮತ್ತು ತನಿಖೆಯ ಅಬಕಾರಿ ಉಪ ನಿರೀಕ್ಷಕರು (ನಂ.1) ರವರು ಅಬಕಾರಿ ವಿಚಕ್ಷಣ ಮಡಿಕೇರಿಯ ತಂಡ ಮೈಸೂರು ಮಂಗಳೂರು ಹೆದ್ದಾರಿಯಲ್ಲಿ ಅಕ್ರಮ ಮಾದಕ ವಸ್ತುಗಳನ್ನು ಕಳ್ಳ ಸಾಗಾಣಿಕೆ ಮಾಡಲಾಗುತ್ತಿದೆ ಎಂಬ ಖಚಿತ ಮಾಹಿತಿ ತಿಳಿದು ಈ ಬಗ್ಗೆ ಸಂಶಯಾಸ್ಪದ ವಾಹನಗಳ ಮೇಲೆ ನಿಗಾ ವಹಿಸಿ ರಸ್ತೆ ಕಾವಲು ಹಮ್ಮಿಕೊಂಡು ಮೇಲಿನ ಸ್ಥಳಗಳಲ್ಲಿ ವಾಸ್ತವ್ಯ ಹೂಡಿದ್ದು ಈ ಸಂದರ್ಭ ಮೈಸೂರು ಕಡೆಯಿಂದ ಮಡಿಕೇರಿ ಕಡೆಗೆ ಒಂದು ಡಿ.ಸಿ.ಎಂ. ಟೊಯೋಟಾ ಮಿನಿಲಾರಿ ಸಂ:KL-07-W-9862 ವಾಹನವು ಬರುವುದನ್ನು ಕಂಡು ಅಬಕಾರಿ ಉಪ ನಿರೀಕ್ಷಕರು ಸದರಿ ವಾಹನವನ್ನು ನಿಲ್ಲಿಸಲು ಸೂಚನೆ ನೀಡಿದಾಗ ವಾಹನದ ಚಾಲಕನು ಸದರಿ ವಾಹನವನ್ನು ರಸ್ತೆಯ ಎಡಬದಿಗೆ ಚಲಾಯಿಸಿ ನಿಲ್ಲಿಸಿದನು. ಸದರಿ ವಾಹನದಲ್ಲಿ ಏನನ್ನು ಸಾಗಿಸಲಾಗುತ್ತಿದೆ ಎಂದು ಚಾಲಕನಲ್ಲಿ ಅಧಿಕಾರಿಯವರು ಪ್ರಶ್ನಿಸಿದಾಗ ಮೀನಿನ ಸರಬರಾಜು ಬಗ್ಗೆ ಮೈಸೂರಿನಿಂದ ಮಂಗಳೂರಿಗೆ ಖಾಲಿ ಕ್ರೇಟುಗಳನ್ನು ಒಯ್ಯಲಾಗುತ್ತಿದೆ ಎಂದು ತಿಳಿಸಿದರು. ನಂತರ ಅಧಿಕಾರಿಯವರು ಲಾರಿಯ ಹಿಂದಿನ ಕಂಪಾರ್ಟ್‌ಮೆಂಟ್ ಬಾಗಿಲನ್ನು ತೆರೆಸಿ ನೋಡಲಾಗಿ ಅದರಲ್ಲಿ 25 ಖಾಲಿ ಪ್ಲಾಸ್ಟಿಕ್ ಕ್ರೇಟುಗಳನ್ನು ಜೋಡಿಸಿದ್ದು ಕಂಡು ಬಂತು. ಸದರಿ ಕಂಪಾರ್ಟ್‌ಮೆಂಟ್ ಅನ್ನು ಪರಿಶೀಲಿಸಿದಾಗ ಕಂಪಾರ್ಟ್‌ಮೆಂಟ್‌ನ ಒಳಗೆ ಮದ್ಯಸಾರದ ವಾಸನೆ ಬರುವುದನ್ನು ಗಮನಿಸಿ ಈ ಬಗ್ಗೆ ಲಾರಿಯ ಕ್ಯಾಬಿನ್ ಭಾಗವನ್ನು ಪರಿಶೀಲಿಸಲಾಗಿ ಚಾಲಕನ ಹಿಂಬದಿಯಲ್ಲಿ ಸನ್ ಮೈಕಾ ಶೀಟಿನ ಗೋಡೆ ಭಾಗ ಅಳವಡಿಸಲಾಗಿದ್ದು ಇದರ ಮಧ್ಯಭಾಗದಲ್ಲಿ ನಾಲ್ಕು ಬೋಲ್ಟ್‌ಗಳನ್ನು ಹಾಕಿರುವುದು ಕಂಡು ಬಂದಿರುತ್ತದೆ. ಇದರಿಂದ ಸಂಶಯಗೊಂಡ ಅಧಿಕಾರಿಯವರು ಸದರಿ ಬೋಲ್ಟ್‌ಗಳನ್ನು ಬಿಚ್ಚಿ ತೋರಿಸುವಂತೆ ಚಾಲಕನಿಗೆ ಸೂಚಿಸಿ, ಚಾಲಕನ ಹಿಂಬದಿಯ ಗೋಡೆಭಾಗವನ್ನು ಬಿಚ್ಚಿ ನೋಡಲಾಗಿ ಒಳಗಡೆ ಒಂದು ಸಣ್ಣ ಭಾಗವನ್ನು ಅಳವಡಿಸಿದ್ದು, ಒಳಗಡೆ ಬಿಳಿ ಪ್ಲಾಸ್ಟಿಕ್ ಕ್ಯಾನುಗಳನ್ನು ನಾಲ್ಕು ಸಾಲುಗಳಲ್ಲಿ ಜೋಡಿಸಲಾಗಿದ್ದು, ಸದರಿ ಭಾಗದಿಂದ ಮದ್ಯಸಾರದ ಘಾಟು ವಾಸನೆ ಬಂದುದರಿಂದ ಕ್ಯಾನುಗಳಲ್ಲಿ ಏನಿದೆ ಎಂದು ಪ್ರಶ್ನಿಸಿದಾಗ ಅವುಗಳಲ್ಲಿ ಮದ್ಯ ಮತ್ತು ಮದ್ಯಸಾರವಿರುವುದಾಗಿ ತಿಳಿಸಿದನು. ತಲಾ 35 ಲೀಟರಿನ 32 ಕ್ಯಾನುಗಳಲ್ಲಿ ಮದ್ಯಸಾರ ಮತ್ತು ತಲಾ 37 ಕ್ಯಾನುಗಳಲ್ಲಿ ಮಿಶ್ರಣ ಮದ್ಯವಿರುವುದಾಗಿ ಒಟ್ಟು 69 ಕ್ಯಾನುಗಳಲ್ಲಿ ಮದ್ಯ ಮತ್ತು ಮದ್ಯಸಾರ

ಹೊಂದಿರುವುದಾಗಿ ತಿಳಿಸಿದನು. ಸದರಿ ವಸ್ತುಗಳ ಸಾಗಾಣಿಕೆ ಬಗ್ಗೆ ಯಾವುದಾದರೂ ರಹದಾರಿ ದಾಖಲೆ ಪತ್ರಗಳು ಇವೆಯೇ ಮತ್ತು ವಾಹನದ ದಾಖಲೆ ಪತ್ರಗಳನ್ನು ಹಾಜರು ಪಡಿಸುವಂತೆ ಚಾಲಕನನ್ನು ಕೇಳಲಾಗಿ ಯಾವುದೇ ದಾಖಲೆ ಪತ್ರಗಳು ಇಲ್ಲವೆಂದು ತಿಳಿಸಿರುತ್ತಾನೆ. ಸದರಿ ಮದ್ಯಸಾರ ತುಂಬಿದ ಕ್ಯಾನುಗಳನ್ನು ಬೇರ್ಪಡಿಸಿ ಮದ್ಯಸಾರವಿರುವ 32 ಬಿಳಿ ಕ್ಯಾನುಗಳ ಗುಂಪನ್ನು 'ಎ' ಎಂಬುದಾಗಿ ಹಾಗೂ 37 ಮಿಶ್ರಣ ಮದ್ಯ ತುಂಬಿದ ಕ್ಯಾನುಗಳನ್ನು ಗುಂಪು 'ಬಿ' ಎಂಬುದಾಗಿ ಗುರುತಿಸಲಾಯಿತು. ಸದರಿ ಅಕ್ರಮ ಮದ್ಯಸಾರ ಹಾಗೂ ಮಿಶ್ರಣವನ್ನು ವಾಹನ ಸಂ: KL-07-W-9862 ರಲ್ಲಿ ವಿಶೇಷವಾಗಿ ಅಡಗಿಸಲು ರಚಿಸಲಾದ ವ್ಯವಸ್ಥೆ ಮಾಡಿ ಸಾಗಿಸಲಾಗುತ್ತಿತ್ತು. ಚಾಲಕನ ವಿಳಾಸ ಕೇಳಲಾಗಿ ವಡೇಕಲ್ ಬಾಬು ರಾವ್, ತಂದೆ ಶಂಕರ ರಾವ್, ಪ್ರಾಯ 35 ವರ್ಷ, ಕದಿರೂರು ಗ್ರಾಮ ಮತ್ತು ಅಂಚೆ, ತಲಚೇರಿ ತಾಲ್ಲೂಕು, ಕಣ್ಣನೂರು ಜಿಲ್ಲೆ, ಕೇರಳ ರಾಜ್ಯ ಹಾಗೂ ಇನ್ನೊಬ್ಬ ಆಸಾಮಿ ಕ್ಲೀನರ್ ಎಂಬಾತನ ವಿಳಾಸ ಕೇಳಲಾಗಿ ಎ.ವಿಜಯನ್, ತಂದೆ ಆರ್ಚಾಮಿ, ಪ್ರಾಯ 33 ವರ್ಷ, ಕುಳಿಜಂಬಾರ ಗ್ರಾಮ, ಎರ್ತೆಂಪದಿ ಅಂಚೆ, ಚಿಟ್ಟೂರು ತಾಲ್ಲೂಕು, ಪಾಲ್ಲಕ್ಕಾಡ್ ಜಿಲ್ಲೆ, ಕೇರಳ ರಾಜ್ಯ ಎಂಬುವುದಾಗಿ ತಿಳಿಸಿರುತ್ತಾರೆ. ರಹದಾರಿ ಇಲ್ಲದೆ ಅಕ್ರಮವಾಗಿ ಮದ್ಯ ಮತ್ತು ಮದ್ಯಸಾರವನ್ನು ಸಾಗಿಸುತ್ತಿದ್ದುದು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 11, 14 ರಂತೆ ಅಪರಾಧವಾಗಿದ್ದು, ಕಲಂ 32, 34, 38(ಎ), 43(ಎ) ರೀತ್ಯಾ ಶಿಕ್ಷಾರ್ಹ ಅಪರಾಧವಾಗಿದ್ದು ಇಬ್ಬರನ್ನು ದಸ್ತಗಿರಿ ಮಾಡಿ ಬಂಧಿಸಿದ ನಂತರ ಸದರಿ ಎರಡು ಗುಂಪಿನ ಕ್ಯಾನುಗಳಿಂದ ಪ್ರತ್ಯೇಕವಾಗಿ 69 ಕ್ಯಾನುಗಳಿಂದ 375 ಮಿಲಿನಷ್ಟು ಮಾದರಿ ತೆಗೆದು 'ಎ' ಗುಂಪಿನ 32 ಕ್ಯಾನುಗಳನ್ನು 'ಎ'1 ರಿಂದ 'ಎ' 32 ರ ವರೆಗೆ ಹಾಗೂ 'ಬಿ' ಗುಂಪಿನ 37 ಕ್ಯಾನುಗಳನ್ನು 'ಬಿ' 1 ರಿಂದ 'ಬಿ' 37 ರ ವರೆಗೆ ಗುರುತಿಸಿ ಇದೇ ರೀತಿಯ ಮಾದರಿ ಚೀಟಿಗಳನ್ನು ತಯಾರಿಸಲಾಯಿತು. ತುರ್ತು ವರ್ತಮಾನ ಬಂದುದರಿಂದ ಶೋಧನಾ ಕಾರ್ಯ ನಡೆಸಲು ಮಾನ್ಯ ನ್ಯಾಯಾಲಯದಿಂದ ಸಮುಚಿತ ಆಧಾರ ಪಡೆಯಲು ಕಾಲಾವಕಾಶ ಇಲ್ಲದ ಪ್ರಯುಕ್ತ ಅಬಕಾರಿ ಅಧಿನಿಯಮ 1965ರ ಕಲಂ 54 ರಂತೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿರುತ್ತಾರೆ. ನಂತರ 32 ಮದ್ಯಸಾರ ತುಂಬಿದ ಕ್ಯಾನುಗಳಿಗೂ ಮತ್ತು 37 ಮಿಶ್ರಣ ಮದ್ಯ ತುಂಬಿದ ಕ್ಯಾನುಗಳಿಗೂ ಮುಚ್ಚಳಗಳನ್ನು ಭದ್ರಪಡಿಸಿ ಅವುಗಳ ಬಾಯಿಗೆ ಬಟ್ಟೆ ಸುತ್ತಿ ದಾರದಿಂದ ಬಿಗಿದು ಇಲಾಖಾ ಸೀಲ್ ಸಂ: 433 ರಿಂದ ಸೀಲ್ ಮಾಡಿ ಮಾದರಿ ಸೀಲನ್ನು ತಯಾರಿಸಿಕೊಂಡು ವಶಪಡಿಸಿಕೊಂಡ ಪೂರ್ಣ ಮದ್ಯಸಾರ ಹಾಗೂ ಮಿಶ್ರಣ ಮದ್ಯದ ಕ್ಯಾನುಗಳನ್ನು ಹಾಗೂ ಸಾಗಾಣಿಕೆಗೆ ಬಳಸಲಾಗಿರುವ ಡಿ.ಸಿ.ಎಂ. ಟೊಯೋಟಾ ಮಿನಿಲಾರಿ ಸಂ: KL-07-W-9862 ಇದರ ಚಾಸೀಸ್ ಸಂ: ಬಿಯು.888008313 ರ ವಾಹನವನ್ನು ಮುಂದಿನ ತನಿಖೆಯ ಬಗ್ಗೆ ವಶಕ್ಕೆ ತೆಗೆದುಕೊಂಡು ಇಬ್ಬರು ಆಸಾಮಿಗಳನ್ನು ಆರೋಪಗಳಿಗೆ ಸಂಬಂಧಿಸಿ ದಸ್ತಗಿರಿ ಮಾಡಿ ಮೊಕದ್ದಮೆ ಸಂ: 6/2005-06, ದಿ:8.10.05 ರಂತೆ ಮೊಕದ್ದಮೆಯನ್ನು ದಾಖಲು ಮಾಡಿರುತ್ತಾರೆ.

ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ಸಂ:1, ಮಡಿಕೇರಿ ತಾಲ್ಲೂಕು ಇವರು ತನಿಖೆಯನ್ನು ಪ್ರಾರಂಭಿಸಿ ಸದರಿ ಮದ್ಯಸಾರದಿಂದ ತೆಗೆದ ಮಾದರಿಯನ್ನು ಕೇಂದ್ರ ರಾಸಾಯನಿಕ ಪ್ರಯೋಗಾಲಯ, ಬೆಂಗಳೂರು ಇವರಿಗೆ ಕಳುಹಿಸಿ, ದಿ: 18.11.05ರ ತಜ್ಞರ ವರದಿಯಲ್ಲಿ 32 ಕ್ಯಾನುಗಳಲ್ಲಿನ ಮದ್ಯಸಾರವು 66.5 ರಿಂದ 66.7 ಓ.ಪಿ. ಇದ್ದು, ಇವುಗಳು ಮದ್ಯ ತಯಾರಿಸಲು ಯೋಗ್ಯವಾಗಿರುವುದಾಗಿಯೂ ಹಾಗೆಯೇ 37 ಕ್ಯಾನುಗಳಲ್ಲಿನ ಮಿಶ್ರಣ ಮದ್ಯವು 36.2 ಯು.ಪಿ. ರಿಂದ 40.8. ಯು.ಪಿ. ಇರುವುದಾಗಿ ಇದು ಸೆಡಿಮೆಂಟ್ ಆಗಿ ಕಳಪೆ ಗುಣಮಟ್ಟದ ಮಿಶ್ರಣ ಮದ್ಯವಾಗಿದ್ದು ಮಾನವನ ಸೇವನೆಗೆ ಯೋಗ್ಯವಿರುವುದಿಲ್ಲವಾಗಿ ದೃಢೀಕರಣ ನೀಡಿರುತ್ತಾರೆ. ಅಬಕಾರಿ ಉಪ ನಿರೀಕ್ಷಕರು ಸದರಿ ದೃಢ ಪತ್ರದ ಆಧಾರದಲ್ಲಿ ವಶಪಡಿಸಿಕೊಳ್ಳಲಾಗಿರುವ ಮದ್ಯಸಾರ ಹಾಗೂ ಮಿಶ್ರಣ ಮದ್ಯವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ತನಿಖಾ ವರದಿಯನ್ನು ದಿ:25.11.05 ರಂದು ಒಪ್ಪಿಸಿರುತ್ತಾರೆ.

ಸದರಿ ಮದ್ಯಸಾರ ಮತ್ತು ಮಿಶ್ರಣ ಮದ್ಯವನ್ನು ವಶಪಡಿಸಿಕೊಂಡು ಎರಡು ತಿಂಗಳು ಕಳೆದರೂ ಸಂಬಂಧಪಟ್ಟವರು ಈ ಪ್ರಾಧಿಕಾರಕ್ಕಾಗಲೀ ಅಥವಾ ಅಬಕಾರಿ ಉಪ ನಿರೀಕ್ಷಕರ ಕಛೇರಿಗಾಗಲೀ ಅರ್ಜಿ ಸಲ್ಲಿಸದಿರುವ ಕಾರಣ ವಾರಸುದಾರರಿಲ್ಲದ ಸ್ವತ್ತುಗಳನ್ನು 1965ರ ಕಲಂ 43 ಸಿ ರಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಬರುವುದರಿಂದ ದಿ: 28.11.05 ರಂದು ಈ ಪ್ರಾಧಿಕಾರದ ಆದೇಶದಂತೆ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿರುತ್ತದೆ.

ಸದರಿ ವಶಪಡಿಸಿಕೊಂಡ ವಾಹನದ ಮಾಲೀಕತ್ವವನ್ನು ತಿಳಿಯಲು ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ಸಂ:1, ಮಡಿಕೇರಿ ತಾಲ್ಲೂಕು ಇವರು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಎರ್ನಕುಲಂ, ಕೇರಳ ರಾಜ್ಯರವರಿಗೆ ಪತ್ರ ಬರೆಯಲಾಗಿದ್ದು, ಅವರಿಂದ ದಿ:18.10.05 ರಂದು ವಾಹನದ ಬಿ ಎಕ್ಸ್‌ಟ್ರ್ಯಾಕ್ಟ್ ಬಂದಿರುತ್ತದೆ. ಅದರಲ್ಲಿ ನಮೂದಿಸಿದಂತೆ ಸದರಿ ಸಂಖ್ಯೆಯ ವಾಹನವು ಎಲ್.ಎಂ.ವಿ. ಮೋಟಾರ್ ಮಿಟ್ಸುಬಿಶಿ ಲ್ಯಾನ್ಸರ್ GLXI ಚಾಸೀಸ್ ಸಂ:MA700CKZAXF104112, ಇಂಜಿನ್ ಸಂ:3MLEY002274 ಎಂದು ನಮೂದಿಸಿರುತ್ತಾರೆ.

ಸದರಿ ಬಿ ಎಕ್ಸ್‌ಟ್ರ್ಯಾಕ್ಟ್ ನಲ್ಲಿ ನಮೂದಿಸಿದ ಇಂಜಿನ್ ಸಂಖ್ಯೆ ಮತ್ತು ಚಾಸೀಸ್ ಸಂಖ್ಯೆಗೂ ವಶಪಡಿಸಿಕೊಂಡ ಟೊಯೋಟಾ ಲಾರಿಯಲ್ಲಿನ ವಾಹನದ ಚಾಸೀಸ್ ಸಂಖ್ಯೆಗೂ ತಾಳೆಯಾಗುವುದಿಲ್ಲ. ಮೊಕದ್ದಮೆಯಲ್ಲಿ ವಶಪಡಿಸಿಕೊಳ್ಳಲಾಗಿರುವ ವಾಹನ ಡಿ.ಸಿ.ಎಂ. ಟೊಯೋಟಾ ಕಂಪನಿಯ ತಯಾರಿಕೆಯ ಮಿನಿಲಾರಿಯಾಗಿದ್ದು, ಸದರಿ ವಾಹನಕ್ಕೆ ನಕಲಿ ನೋಂದಣಿ ಸಂಖ್ಯೆ: KL-07-W-9862 ನ್ನು ಅಳವಡಿಸಿ ಅಕ್ರಮವಾಗಿ ಮದ್ಯಸಾರ ಸಾಗಾಣಿಕೆಗೆ ಬಳಸಲಾಗಿರುವುದು ತಿಳಿಯಬಹುದಾಗಿದೆ.

ವಾಹನವನ್ನು ಜಪ್ತಿ ಮಾಡಿಕೊಂಡು ಎರಡು ತಿಂಗಳು ಕಳೆದರೂ ಸಹಾ ವಾಹನ ಮತ್ತು ವಶಪಡಿಸಿಕೊಂಡ ವಸ್ತುಗಳಿಗೆ ಸಂಬಂಧಪಟ್ಟವರು ಯಾರೂ ಈ ಪ್ರಾಧಿಕಾರದ ಮುಂದೆ ಸೂಕ್ತ ದಾಖಲೆ ಪತ್ರಗಳೊಂದಿಗೆ ಹಾಜರಾಗಿ ಅರ್ಜಿ ಸಲ್ಲಿಸಿರುವುದಿಲ್ಲ. ಆದುದರಿಂದ ಸದರಿ ಆರೋಪಿಗಳು ನಕಲಿ ನೋಂದಣಿ ಸಂಖ್ಯೆಯನ್ನು ಅಳವಡಿಸಿ ವಾಹನದಲ್ಲಿ ಅಕ್ರಮ ಮಾದಕ ವಸ್ತುಗಳ ಸರಬರಾಜಿನಲ್ಲಿ ತೊಡಗಿ ತನ್ನ ಸ್ವಂತ ಲಾಭಕ್ಕಾಗಿ ಸರ್ಕಾರದ ಬೊಕ್ಕಸಕ್ಕೆ ನಷ್ಟ ಉಂಟು ಮಾಡಿ ಕಾನೂನಿನ ಅರಿವಿದ್ದೇ ಅಕ್ರಮ ವ್ಯವಹಾರದಲ್ಲಿ ಒಳಗೊಂಡು ವಾಹನವನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸಾಬೀತಾಗಿರುತ್ತದೆ.

ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43 ರಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಲ್ಲಿ ಆರೋಪಿಗಳು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಗಳು ಇಲ್ಲದಿದ್ದಲ್ಲಿ ಹಾಗೂ ಜಪ್ತಿ ಮಾಡಲಾದ ವಾಹನವನ್ನು ಜಪ್ತುಪಡಿಸಿದ ಒಂದು ತಿಂಗಳೊಳಗೆ ಯಾವುದೇ ವ್ಯಕ್ತಿಯು ವಾಹನಕ್ಕೆ ಸಂಬಂಧಿಸಿದ ಕಾನೂನುಬದ್ಧವಾದ ದಾಖಲಾತಿಗಳೊಂದಿಗೆ ಮಾಲೀಕತ್ವವನ್ನು ಕೋರಿ ಪ್ರಾಧಿಕಾರದ ಮುಂದೆ ಬಾರದಿದ್ದಲ್ಲಿ ಮತ್ತು ಸದರಿ ಸ್ವತ್ತುಗಳು ಕರ್ನಾಟಕ ಅಬಕಾರಿ ಕಾಯಿದೆ 1965, ಕಲಂ 43ಸಿ ರಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದಂತಹ ಸ್ವತ್ತುಗಳಾಗಿದ್ದಲ್ಲಿ ಈ ಪ್ರಾಧಿಕಾರವು ಅಕ್ರಮ ಮದ್ಯ ಸಾಗಾಣಿಕೆಗೆ ಬಳಸಿದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದೆ.

ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲನೆ ಮಾಡಿದಾಗ ಸದರಿ ಮೊಕದ್ದಮೆಯಲ್ಲಿ ಡಿ.ಸಿ.ಎಂ. ಟೊಯೋಟಾ ಮಿನಿಲಾರಿ ಸಂ:KL-07-W-9862 ರ ನ್ನು ವಶಪಡಿಸಿಕೊಂಡು ಸುಮಾರು ಎರಡು ತಿಂಗಳು ಕಳೆದರೂ ಯಾವುದೇ ವ್ಯಕ್ತಿಯು ಸೂಕ್ತ ದಾಖಲಾತಿಗಳೊಂದಿಗೆ ವಾಹನದ ಮಾಲೀಕತ್ವವನ್ನು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ ಹಾಗೂ ವಾಹನದ ನೋಂದಣಿ ಸಂಖ್ಯೆಯು ನಕಲಿ ಆಗಿದ್ದು, ವಾಹನದ

ಮಾಲೀಕರು ಅವರ ತಿಳಿವಳಿಕೆಯಿಂದಲೇ ಈ ಕೃತ್ಯಕ್ಕೆ ಶಾಮೀಲಾಗಿರುವುದು ಸ್ಪಷ್ಟವಾಗಿ ಕಾಣಬರುತ್ತದೆ. ಮತ್ತು ವಾಹನವನ್ನು ಇನ್ನು ಹೆಚ್ಚು ಸಮಯ ಚಾಲನೆ ಸ್ಥಿತಿಯಿಲ್ಲದೆ ನಿಂತಲ್ಲೇ ನಿಂತು ತುಕ್ಕು ಹಿಡಿದು ಸರಕಾರಕ್ಕೆ ಬರುವ ಆದಾಯವು ಕಡಿಮೆಯಾಗುವ ಸಾಧ್ಯತೆ ಇರುವುದರಿಂದ ಸದರಿ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತ ಎಂಬ ನಿರ್ಧಾರಕ್ಕೆ ಬಂದು ಈ ಆದೇಶ.

**ಆದೇಶ**

**ನಂ:ಇಎಕ್ಸ್‌ಇ:3:ಡಿಟಿಸಿಆರ್‌ಎಂ:104:2005-06, ದಿನಾಂಕ: 30ನೇ ನವೆಂಬರ್ 2005**

ಎನ್.ಎಂ. ಹುಸೇನ್, ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಕೊಡಗು ಜಿಲ್ಲೆ ಮಡಿಕೇರಿ, ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಎ) ನಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಪ್ರಕರಣದ ಆರೋಪಿಗಳು ವಾಹನಕ್ಕೆ ನಕಲಿ ನೋಂದಣಿ ಸಂಖ್ಯೆ ಅಳವಡಿಸಿರುವ ಕಾರಣ ವಾಹನದ ಮೂಲ ವಾರಸುದಾರರು ಯಾರು ಎಂಬುದು ತಿಳಿಯಲು ಸಾಧ್ಯವಾಗದಿರುವುದರಿಂದ ನಿಯಮ 43(ಬಿ) ರನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಲು ಸಾಧ್ಯವಾಗದ ಕಾರಣ ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ಸಂ:1, ಮಡಿಕೇರಿ ತಾಲ್ಲೂಕು ಇವರ ಮೊಕದ್ದಮೆ ಸಂ: 6/2005-06, ದಿ: 8.10.05 ರಂದು ಜಪ್ತಿಪಡಿಸಿಕೊಂಡ ನಕಲಿ ನೊಂದಣಿ ಸಂಖ್ಯೆಯ ಡಿ.ಸಿ.ಎಂ. ಟೊಯೋಟಾ ಮಿನಿಲಾರಿ ಸಂ:KL-07-W-9862 ರನ್ನು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43 ಸಿ ಅನ್ವಯ ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಮುಟ್ಟುಗೋಲು ಹಾಕಿಕೊಳ್ಳಲಾಗಿರುವ ವಾಹನವನ್ನು 30 ದಿನಗಳು ಕಳೆದ ನಂತರ ಕರ್ನಾಟಕ ಅಬಕಾರಿ (ಮುಟ್ಟುಗೋಲು ಸ್ವತ್ತುಗಳ ವಿಲೇವಾರಿ) ನಿಯಮಗಳ 1967ರ ಅನುಸಾರ ಬಹಿರಂಗ ಹರಾಜು ಮೂಲಕ ವಿಲೇಗೊಳಿಸಲು ಆದೇಶಿಸಿದೆ.

ಈ ಆದೇಶ ಇಂದು ಅಂದರೆ 30.11.05 ರಂದು ಬೆರಳಚ್ಚು ಮಾಡಿ ಬೆರಳಚ್ಚು ಮಾಡಿದ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು. ಈ ಆದೇಶ ಇಂದಿನಿಂದ 30 ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು,
ಕೊಡಗು ಜಿಲ್ಲೆ, ಮಡಿಕೇರಿ.

ಪಿ.ಆರ್. 24

**ಆರ್ಥಿಕ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಆಇ 176 ಆಖಇ 2005(1), ಬೆಂಗಳೂರು, ದಿನಾಂಕ: 21ನೇ ಡಿಸೆಂಬರ್ 2005**

ಸರ್ಕಾರದ ಅಧಿಸೂಚನೆ ಸಂಖ್ಯೆ:ಆಇ 176 ಆಖಇ 2005, ದಿನಾಂಕ: 28.9.2005ರ ಭಾಗ ಎ ಕ್ರಮ ಸಂಖ್ಯೆ:71ರಲ್ಲಿ ಸಹಾಯಕ ಖಜಾನಾಧಿಕಾರಿಗಳ ಹುದ್ದೆಗೆ ಸ್ಥಾನಪನ್ನ ಮುಂಬಡ್ತಿ ಪಡೆದಿರುವ ಶ್ರೀ ಸಂಪತ್‌ಕುಮಾರ್ ಪಿ.ರವರು ಅನಾರೋಗ್ಯದ ಕಾರಣದಿಂದ ಮುಂಬಡ್ತಿ ನಿರಾಕರಿಸಿ ನೀಡಿರುವ ಮನವಿಯನ್ನು ಸಮ್ಮತಿಸಿ, ಕರ್ನಾಟಕ ನಾಗರೀಕ ಸೇವಾ ನಿಯಮಗಳು 1977ರ ನಿಯಮ 4(ಎ)ರಲ್ಲಿನ ಷರತ್ತಿಗೊಳಪಟ್ಟು ಇವರ ಮುಂಬಡ್ತಿಯನ್ನು ಹಿಂಪಡೆಯಲಾಗಿದೆ. ಈ ನೌಕರರು ಒಂದು ವರ್ಷದ ಅವಧಿಗೆ ಮುಂಬಡ್ತಿಗೆ ಅರ್ಹರಾಗಿರುವುದಿಲ್ಲ. ಮತ್ತು ಇವರಿಗಿಂತ ಜೇಷ್ಠತೆಯಲ್ಲಿ ಕಿರಿಯರಾದ ನೌಕರರು ಬಡ್ತಿ ಹೊಂದಿದಲ್ಲಿ ಅವರ ಮೇಲೆ ಜೇಷ್ಠತೆಯನ್ನು ಕಳೆದುಕೊಳ್ಳುವರು.

ಇದೇ ಅಧಿಸೂಚನೆಯ ಭಾಗ-ಬಿ ರ ಕ್ರಮ ಸಂಖ್ಯೆ:14ರಲ್ಲಿನ ಶ್ರೀಮತಿ ಹೆಚ್.ಎಸ್. ಸುಮಿತ್ರ, ಮುಖ್ಯ ಲೆಕ್ಕಿಗರು ಇವರನ್ನು ಸ್ವತಂತ್ರ ಪ್ರಭಾರದಲ್ಲಿರಿಸಿ ಆದೇಶಿಸಿದ್ದರ ಮೇರೆಗೆ ಶ್ರೀಮತಿ ಸುಮಿತ್ರ ರವರು ತಮ್ಮ ಕೌಟುಂಬಿಕ ಸಮಸ್ಯೆಗಳ ಮೇರೆಗೆ ಸ್ವತಂತ್ರ ಪ್ರಭಾರದ ಮುಂಬಡ್ತಿಯನ್ನು ಬಿಟ್ಟುಕೊಡಲು ಮನವಿ ಸಲ್ಲಿಸಿದ್ದನ್ನು ಸರ್ಕಾರವು ಸಮ್ಮತಿಸಿ ಇವರ ಸ್ವತಂತ್ರ ಪ್ರಭಾರ ವ್ಯವಸ್ಥೆಯಿಂದ ಇವರನ್ನು ಬಿಡುಗಡೆಗೊಳಿಸಿದೆ. ಇವರು ಭವಿಷ್ಯಾವರ್ತಿಯಲ್ಲಿ ತಮಗೆ ಪೂರ್ವಾನ್ವಯವಾಗಿ ಬಡ್ತಿ ನೀಡುವಂತೆ ಪರಿಗಣಿಸಲು ಕೋರಿದಲ್ಲಿ ಇವರಿಗೆ ಕರ್ನಾಟಕ ನಾಗರೀಕ ಸೇವಾ (ಬಡ್ತಿ, ವೇತನ ಮತ್ತು ಪಿಂಚಣಿ ಕ್ರಮಬದ್ಧಗೊಳಿಸುವಿಕೆ) ನಿಯಮಗಳು 1978ರ ನಿಯಮ 3ರನ್ವಯ ಅಂತಹ ಪೂರ್ವಾನ್ವಯ ಬಡ್ತಿಗೆ ಅರ್ಹರಾಗಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಲ್. ಶ್ರೀನಿವಾಸನ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡ).

ಪಿ.ಆರ್. 25

## ವ್ಯವಹಾರ ನ್ಯಾಯಾಧೀಶರ (ಕಿ.ಶ್ರೇ.) ಮತ್ತು ಪ್ರಥಮ ದರ್ಜೆನ್ಯಾಯಿಕ ದಂಡಾಧಿಕಾರಿಗಳವರ ನ್ಯಾಯಾಲಯ, ಯಲಬುರ್ಗಾ, ಜಿಲ್ಲಾ ಕೊಪ್ಪಳ

**ಸಾರ್ವಜನಿಕ ಪ್ರಕಟಣೆ**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಈ ಕೆಳಗೆ ಕಾಣಿಸಿದ ಮುದ್ದೆ ಮಾಲುಗಳಿಗೆ ಯಾವುದೇ ವಾರಸುದಾರರಾಗಲೀ, ಹಕ್ಕುದಾರರಾಗಲೀ ಇಲ್ಲಿಯವರೆಗೆ ತಮ್ಮದೆಂದು ಗುರುತಿಸಿ ಸದರಿ ಮುದ್ದೆ ಮಾಲುಗಳು ತಮಗೆ ಬೇಕೆಂದು ಪ್ರಯತ್ನ ಮಾಡಿರುವುದಿಲ್ಲಾ.

ಕಾರಣ ಈ ಪ್ರಕಟಣೆ ಹೊರಡಿಸಿದ ದಿನಾಂಕದಿಂದ ಆರು (6) ತಿಂಗಳ ಒಳಗಾಗಿ ಕೆಳಗೆ ಕಾಣಿಸಿದ ಮುದ್ದೆ ಮಾಲುಗಳ ಬಗ್ಗೆ ತಮ್ಮ ವಾರಸುದಾರಿಕೆಯಾಗಲೀ ಅಥವಾ ಹಕ್ಕುದಾರಿಕೆಯಾಗಲೀ ಇದ್ದಲ್ಲಿ ತಮ್ಮದೆಂದು ಖಚಿತಪಡಿಸಿಕೊಳ್ಳಲು ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿ ಒಯ್ಯಬಹುದು. ಇದಕ್ಕೆ ತಪ್ಪಿದಲ್ಲಿ ಸದರಿ ಮುದ್ದೆ ಮಾಲುಗಳಿಗೆ ವಾರಸುದಾರರಾಗಲೀ ಅಥವಾ ಹಕ್ಕುದಾರರಾಗಲೀ ಯಾರು ಇರುವುದಿಲ್ಲವೆಂದು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

| ಕ್ರ. ಸಂ. | ಪ್ರಕರಣದ ನಂಬರು | ಪಿ.ಆರ್. ನಂಬರು | ಪ್ರಕರಣವು ನಿಕಾಲೆಯಾದ ದಿನಾಂಕ | | ಸ್ವತ್ತಿನ ವಿವರ |
|---|---|---|---|---|---|
| 1 | ಕ್ರಿ.ಮಿ.17:05 | 41:05 | | 1. | ಒಂದು ಕೆಂಪು ಮಿಶ್ರಿತ ಹಳೆಯ ಸುಜುಕಿ ಸಾಮ್‌ರಾಯ್ ಮೋಟಾರ್ ಸೈಕಲ್ ನಂ.ಕೆ.ಎ.35:ಇ.-4266 ಅಂತಾ ನಂಬರ್ ಪ್ಲೇಟ್ ಇದ್ದದ್ದು ಅ:ಕಿ:ರೂ.ಹತ್ತು ಸಾವಿರ |

| ಕ್ರ. ಸಂ. | ಪ್ರಕರಣದ ನಂಬರು | ಸಿ.ಆರ್. ನಂಬರು | ಪ್ರಕರಣವು ನಿಕಾಲೆಯಾದ ದಿನಾಂಕ | ಸ್ವತ್ತಿನ ವಿವರ |
|---|---|---|---|---|
| 2 | ಕ್ರಿ.ಮಿ.18:05 | 42:05 | | 1. ಒಂದು ಕಪ್ಪು ಬಣ್ಣದ ಹಳೆಯ ಹೊಂಡಾ ಕಂಪನಿಯ ಮೋಟಾರ್ ಸೈಕಲ್ ನಂಬರ್ ಪ್ಲೇಟ್ ಇರುವುದಿಲ್ಲಾ, ಚಾಸ್ಸಿನ ನಂಬರ್. ಎಆಯ್‌ಓಎಫ್-022060 ಅಂದಾಜು ಕಿಮ್ಮತ್ತು 8 ರಿಂದಾ 10 ಸಾವಿರ ರೂಪಾಯಿಗಳು. |
| 3 | ಕ್ರಿ.ಮಿ.19:05 | 43:05 | | 1. ಒಂದು ಕಪ್ಪು ಬಣ್ಣದ ಹಳೆಯ ಬಜಾಜ್ ಕಂಪನಿಯ ಮೋಟಾರ್ ಸೈಕಲ್ ನಂಬರ್ ಕೆ.ಎ.17:ಹೆಚ್.4480 ಅಂದಾಜು ಕಿಮ್ಮತ್ತು ರೂ. 8 ಸಾವಿರ ರೂಪಾಯಿಗಳು. |

ಇಂದು ದಿನಾಂಕ:16ನೇ ಜುಲೈ 2005 ರಂದು ನನ್ನ ಸಹಿ ಮತ್ತು ನ್ಯಾಯಾಲಯದ ಮೊಹರಿನೊಂದಿಗೆ ಕೊಡಲ್ಪಟ್ಟಿದೆ.

**ಮಂಜುನಾಥ್ ಜಿ.ಎ.**

ಪಿ.ಆರ್. 27                    ವ್ಯ.ನ್ಯಾ. (ಕಿ.ಶ್ರೇ.) ಮತ್ತು ಪ್ರದನ್ಯಾದಂಗಳು ಯಲಬುರ್ಗಾ.

## ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಕೇಂದ್ರ ಕಛೇರಿ, ಬೆಂಗಳೂರು, ಇವರ ನಡವಳಿಗಳು

**ವಿಷಯ:** ಹುಬ್ಬಳ್ಳಿ ಧಾರವಾಡ ಸರಕು ಸಾಗಾಣಿಕೆದಾರರ ಗ್ರಾಹಕರ ಸಹಕಾರ ಸಂಘ ನಿಯಮಿತ, ಹುಬ್ಬಳ್ಳಿ, ಇದನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:**
1. ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಳಗಾವಿ ಪ್ರಾಂತ ಇವರ ಪತ್ರ ಸಂಖ್ಯೆ: ಜೆಆರ್‌ಎಲ್/ಎ/ಸಿಆರ್/152/04-05, ದಿನಾಂಕ 22.8.2005.
2. ಸಹಕಾರ ಅಭಿವೃದ್ಧಿ ಅಧಿಕಾರಿ, ಹುಬ್ಬಳ್ಳಿ, ಇವರ ಪ್ರಸ್ತಾವನೆ ಸಂಖ್ಯೆ: ಸಅಹದಾಸಸಗತ/05-06, ದಿನಾಂಕ:1.4.2005, ದಿನಾಂಕ: 8.7.2005.
3. ಈ ಕಛೇರಿಯ ಇದೇ ಕ್ರಮಾಂಕದ ನೋಟೀಸ್ ದಿ:14.10.2005.
4. ಅಧ್ಯಕ್ಷರು, ಹುಬ್ಬಳ್ಳಿ ಧಾರವಾಡ ಸರಕು ಸಾಗಾಣಿಕೆದಾರರ ಗ್ರಾಹಕರ ಸಹಕಾರ ಸಂಘ ನಿ., ಹುಬ್ಬಳ್ಳಿ, ಇವರ ಪತ್ರ ದಿನಾಂಕ 22.11.2005.

**ಪ್ರಸ್ತಾವನೆ:**

ಹುಬ್ಬಳ್ಳಿ ಧಾರವಾಡ ಸರಕು ಸಾಗಾಣಿಕೆದಾರರ ಗ್ರಾಹಕರ ಸಹಕಾರ ಸಂಘ ನಿ., ಹುಬ್ಬಳ್ಳಿ, ಈ ಸಂಘವು ಸಂಖ್ಯೆ: ಜೆಆರ್‌ಎಲ್/25779/ಆರ್‌ಜಿಎಸ್/1999-2000, ದಿನಾಂಕ: 3.1.2000 ರಂತೆ ನೋಂದಣಿ ಆಗಿರುತ್ತದೆ. ಇದರ ಕಾರ್ಯವ್ಯಾಪ್ತಿಯು ವಿಭಜಿತ ಧಾರವಾಡ ಜಿಲ್ಲೆಗೆ ಸೀಮಿತವಾಗಿರುತ್ತದೆ.

ಸಂಘವು ತನ್ನ ಕಾರ್ಯ ಚಟುವಟಿಕೆಗಳಲ್ಲಿ ತೊಡಗದೆ ಹಾನಿಯಲ್ಲಿದ್ದು, ತನ್ನ ಮೂಲ ಉದ್ದೇಶಗಳನ್ವಯ ವ್ಯವಹರಿಸದೆ ಸ್ಥಗಿತಗೊಂಡಿರುತ್ತದೆ.

1. ಸಂಘವು ತನ್ನ ಬೈಲಾದಲ್ಲಿರುವ ಮೂಲ ಉದ್ದೇಶಗಳನ್ವಯ ಕಾರ್ಯನಿರ್ವಹಿಸದೆ ಸ್ಥಗಿತಗೊಂಡಿದೆ.
2. ಸಂಘವು ಆರ್ಥಿಕ ಸಂಪನ್ಮೂಲ ಶೇಖರಿಸಿ ಪುನಃಶ್ಚೇತನಗೊಳ್ಳಲು ವಿಫಲವಾಗಿದೆ.
3. ಸಂಘದ ಬೈಲಾಗಳನ್ವಯ ಆಡಳಿತ ಮಂಡಳಿ ಸಭೆ ಹಾಗೂ ವಾರ್ಷಿಕ ಸರ್ವ ಸಾಧಾರಣ ಸಭೆ ಜರುಗಿಸಲು ವಿಫಲವಾಗಿದೆ.
4. ಸಂಘದಲ್ಲಿ ವೇತನ ಕಾರ್ಯದರ್ಶಿ ಇರುವುದಿಲ್ಲ.
5. ಸಂಘದ ಆದಾಯಕ್ಕಿಂತ ಹೆಚ್ಚಿಗೆ ಖರ್ಚು ಇರುವುದರಿಂದ ಸಂಘವು ಹಾನಿಯಲ್ಲಿ ಮುಂದುವರೆದಿದೆ.

ಈ ಅಂಶಗಳ ಹಿನ್ನೆಲೆಯಲ್ಲಿ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ಸಮಾಪನೆಗೊಳಿಸಲು ಸಹಕಾರ ಸಂಘಗಳ ಜಂಟಿ ನಿಬಂಧಕರು ಉಲ್ಲೇಖ (1) ರನ್ವಯ ಶಿಫಾರಸ್ಸು ಮಾಡಿರುತ್ತಾರೆ.

ಇದರನ್ವಯ ಸಂಘವನ್ನು ಕಲಂ 72(2) ರನ್ವಯ ಸಮಾಪನೆಗೊಳಿಸಲು ಸಂಘದ ಅಧ್ಯಕ್ಷರು ಹಾಗೂ ಆಡಳಿತ ಮಂಡಳಿಯ ಸದಸ್ಯರಿಗೆ ಉಲ್ಲೇಖ (3) ರನ್ವಯ ನೋಟೀಸ್ ಜಾರಿ ಮಾಡಿ ಸಂಘವನ್ನು ಸಮಾಪನೆಗೊಳಿಸಲು ಆಕ್ಷೇಪಣೆ ಅಥವಾ ಹೇಳಿಕೆಯೇನಾದರೂ ಇದ್ದಲ್ಲಿ ಲಿಖಿತ ಮೂಲಕ ತಿಳಿಸಲು ಸೂಚಿಸಲಾಗಿತ್ತು. ಅದರಂತೆ ಉಲ್ಲೇಖ (4) ರಲ್ಲಿ ಅಧ್ಯಕ್ಷರು ಹಾಗೂ ನಿರ್ದೇಶಕರುಗಳು ಸಂಘವನ್ನು ಸಮಾಪನೆಗೊಳಿಸಲು ತಮ್ಮ ಆಕ್ಷೇಪಣೆಗಳೇನು ಇಲ್ಲವೆಂದು ತಿಳಿಸಿರುತ್ತಾರೆ. ಆದ್ದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಆದೇಶ**

**ಸಂ:ಆರ್‌ಸಿಎಸ್/ಎಲ್‌ಕ್ಯೂಡಿ/95/05-06, ದಿನಾಂಕ: 21ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಿರುವ ಅಂಶಗಳ ಹಿನ್ನೆಲೆಯಲ್ಲಿ ವಿ. ಚನ್ನಪ್ಪ, ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಕೇಂದ್ರ ಕಛೇರಿ, ಬೆಂಗಳೂರು, ಆದ ನಾನು ಸರ್ಕಾರದ ಅಧಿಸೂಚನೆ ಕ್ರ.ಸಂ: ಸಿಎಂಡಬ್ಲ್ಯೂ/69/ಸಿಎಲ್‌ಎಂ/2001 ದಿ:21.11.01 ಹಾಗೂ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)(ಬಿ) ರನ್ವಯ ದತ್ತವಾಗಿರುವ ಅಧಿಕಾರದನ್ವಯ ಹುಬ್ಬಳ್ಳಿ ಧಾರವಾಡ ಸರಕು ಸಾಗಾಣಿಕೆದಾರರ ಗ್ರಾಹಕರ ಸಹಕಾರ ಸಂಘ ನಿಯಮಿತ ಹುಬ್ಬಳ್ಳಿ, ಈ ಸಂಘವನ್ನು ಸಮಾಪನೆಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73(1)ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ, ಹುಬ್ಬಳ್ಳಿ, ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿರುತ್ತೇನೆ.

ಸಮಾಪನಾಧಿಕಾರಿಗಳು ಸಂಘದ ಪ್ರಭಾರವನ್ನು 15 ದಿನಗಳೊಳಗಾಗಿ ಪಡೆದುಕೊಂಡು ಪ್ರಭಾರ ಪಟ್ಟಿ ಸಲ್ಲಿಸತಕ್ಕದ್ದು, ಅಲ್ಲದೆ ಸಂಘದ ಅಥಾವೆ ಪತ್ರದ ಆಧಾರದ ಮೇಲೆ ಆದ್ಯತಾ ಪಟ್ಟಿ ತಯಾರಿಸಿ ಈ ಕಛೇರಿಯಿಂದ ಅನುಮತಿ ಪಡೆದು ಆಸ್ತಿಯು ವಸೂಲಾದಂತೆ ಆದ್ಯತೆ ಮೇಲೆ ಜವಾಬ್ದಾರಿ ತೀರುವಳಿ ಮಾಡಿ ಸಂಘದ ನೋಂದಣಿ ರದ್ದತಿಯ ಪ್ರಸ್ತಾವೆ ಸಲ್ಲಿಸಲು ಜರೂರು ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ನನ್ನ ಹಸ್ತಾಕ್ಷರ ಹಾಗೂ ಕಛೇರಿಯ ಮೊಹರಿನೊಂದಿಗೆ ದಿ:21.12.2005 ರಂದು ನೀಡಲಾಗಿದೆ.

**ವಿ. ಚನ್ನಪ್ಪ**

ಪಿ.ಆರ್. 28                    ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ)

**ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಕೇಂದ್ರ ಕಛೇರಿ, ಬೆಂಗಳೂರು ಇವರ ನಡವಳಿಗಳು**

**ವಿಷಯ:** ಸಮಾಪನೆಯಲ್ಲಿರುವ ದಕ್ಷಿಣ ಕನ್ನಡ, ಸಣ್ಣ ಉದ್ಯಮ ಸಣ್ಣ ಉತ್ಪಾದನಾ ಮತ್ತು ಮಾರಾಟ ಸಹಕಾರ ಸಂಘ ನಿ., ಮಂಗಳೂರು ಇದರ ಸಮಾಪನಾಧಿಕಾರಿಗಳ ಬದಲಾವಣೆ ಕುರಿತು.

**ಉಲ್ಲೇಖ:**
1. ಈ ಕಛೇರಿಯ ಇದೇ ಕ್ರಮಾಂಕದ ಸಮಾಪನಾದೇಶ ದಿನಾಂಕ: 17.9.2005.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಂಗಳೂರು ಇವರ ಪತ್ರ ಸಂಖ್ಯೆ:ಎಆರ್-36/ಎಲ್‌ಕ್ಯೂಡಿ/ಎಸ್-8/2005-06, ದಿನಾಂಕ: 14.11.2005.

**ಪ್ರಸ್ತಾವನೆ:**

ಸಮಾಪನೆಯಲ್ಲಿರುವ ದಕ್ಷಿಣ ಕನ್ನಡ ಸಣ್ಣ ಉದ್ಯಮ ಸಣ್ಣ ಉತ್ಪಾದನಾ ಮತ್ತು ಮಾರಾಟ ಸಹಕಾರ ಸಂಘ ನಿ., ಮಂಗಳೂರು ಈ ಸಂಘವನ್ನು ಉಲ್ಲೇಖ (1) ರನ್ವಯ ಸಮಾಪನೆಗೊಳಿಸಿ ಮಾರಾಟಾಧಿಕಾರಿ-1, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಮಂಗಳೂರು ಉಪವಿಭಾಗ, ಮಂಗಳೂರು ಇವರನ್ನು ಸಮಾಪನಾಧಿಕಾರಿಗಳನ್ನಾಗಿ ನೇಮಿಸಲಾಗಿತ್ತು.

ಉಲ್ಲೇಖ (2)ರಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಂಗಳೂರು ಇವರು ಮಾರಾಟಾಧಿಕಾರಿಗಳು ಸದರಿ ಕಛೇರಿಯ ಅಧೀಕ್ಷಕರ ಹುದ್ದೆಯ ಅಧಿಕ ಪ್ರಭಾರದಲ್ಲಿರುವುದರಿಂದ ಹಾಗೂ ಉಳಿ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ (ನಿ) ದಲ್ಲಿನ ಅವ್ಯವಹಾರಗಳಿಗೆ ಸಂಬಂಧಿಸಿದಂತೆ ಕಲಂ 64ರ ವಿಚಾರಣಾಧಿಕಾರಿಯಾಗಿ ವಿಚಾರಣೆ ನಡೆಸುತ್ತಿದ್ದಾರೆ. ಆದ್ದರಿಂದ ಸದರಿಯವರು ಸಮಾಪನಾಧಿಕಾರಿಯಾಗಿ ಕಾರ್ಯ ನಿರ್ವಹಿಸಲು ಅಧಿಕ ಕೆಲಸಗಳ ಒತ್ತಡದಿಂದ ಸಾಧ್ಯವಾಗುವುದಿಲ್ಲ. ಆದ್ದರಿಂದ ಸದರಿ ಸಮಾಪನಾದೇಶವನ್ನು ಮಾರ್ಪಡಿಸಿ ಮಾರಾಟಾಧಿಕಾರಿ-II ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲು ಕೋರಿರುತ್ತಾರೆ.

ಈ ಅಂಶಗಳನ್ನು ಪರಿಶೀಲಿಸಿ ಸಮಾಪನಾಧಿಕಾರಿಯನ್ನು ಬದಲಾಯಿಸುವುದು ಸೂಕ್ತವೆಂದು ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ಸಂ:ಆರ್‌ಸಿಎಸ್/ಎಲ್‌ಕ್ಯೂಡಿ/76/2005-06, ದಿನಾಂಕ: 22ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ಹೇಳಿದ ಎಲ್ಲಾ ಅಂಶಗಳನ್ವಯ ಉಲ್ಲೇಖ (1)ರ ಸಮಾಪನಾದೇಶವನ್ನು ಮಾರ್ಪಡಿಸಿ ಮಾರಾಟಾಧಿಕಾರಿಗಳು-I ಇವರ ಬದಲಿಗೆ ಮಾರಾಟಾಧಿಕಾರಿಗಳು-II ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಮಂಗಳೂರು ಉಪವಿಭಾಗ, ಮಂಗಳೂರು ಇವರನ್ನು ಸಮಾಪನಾಧಿಕಾರಿಗಳನ್ನಾಗಿ ನೇಮಕ ಮಾಡಲಾಗಿದೆ.

ಸಮಾಪನಾಧಿಕಾರಿಗಳು ಸಂಘದ ಪ್ರಭಾರವನ್ನು 15 ದಿನಗಳೊಳಗಾಗಿ ಪಡೆದುಕೊಂಡು ಪ್ರಭಾರ ಪಟ್ಟಿ ಸಲ್ಲಿಸತಕ್ಕದ್ದು, ಅಲ್ಲದೆ ಸಂಘದ ಆದ್ಯತಾ ಪಟ್ಟಿಯಂತೆ ಆಸ್ತಿಯು ವಸೂಲಾದಂತೆ ಆದ್ಯತೆ ಮೇಲೆ ಜವಾಬ್ದಾರಿ ತೀರುವಳಿ ಮಾಡಲು ಜರೂರು ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ನನ್ನ ಹಸ್ತಾಕ್ಷರ ಹಾಗೂ ಕಛೇರಿಯ ಮೊಹರಿನೊಂದಿಗೆ ದಿ:22.12.2005 ರಂದು ನೀಡಲಾಗಿದೆ.

ಪಿ.ಆರ್. 29 ಸಹಕಾರ ಸಂಘಗಳ ಹೆಚ್ಚುವರಿ ನಿಬಂಧಕರು, (ಬಳಕೆ ಮತ್ತು ಮಾರಾಟ)

**ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಕೇಂದ್ರ ಕಛೇರಿ, ಬೆಂಗಳೂರು ಇವರ ನಡವಳಿಗಳು**

**ವಿಷಯ:** ಸಮಾಪನೆಯಲ್ಲಿರುವ ದಕ್ಷಿಣ ಕನ್ನಡ, ವೇರ್‌ಹೌಸ್ ಗೋಡೌನ್ ಸಹಕಾರ ಸಂಘ ನಿ., ಮಂಗಳೂರು ಇದರ ಸಮಾಪನಾಧಿಕಾರಿಗಳ ಬದಲಾವಣೆ ಕುರಿತು.

**ಉಲ್ಲೇಖ:**
1. ಈ ಕಛೇರಿಯ ಇದೇ ಕ್ರಮಾಂಕದ ಸಮಾಪನಾದೇಶ ದಿನಾಂಕ: 17.9.2005.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಂಗಳೂರು ಇವರ ಪತ್ರ ಸಂಖ್ಯೆ:ಎಆರ್-36/ಎಲ್‌ಕ್ಯೂಡಿ/ಎಸ್-8/2005-06, ದಿನಾಂಕ: 14.11.2005.

**ಪ್ರಸ್ತಾವನೆ:**

ಸಮಾಪನೆಯಲ್ಲಿರುವ ದಕ್ಷಿಣ ಕನ್ನಡ ವೇರ್ ಹೌಸ್ ಗೋಡೌನ್ ಸಹಕಾರ ಸಂಘ ನಿ., ಮಂಗಳೂರು ಈ ಸಂಘವನ್ನು ಉಲ್ಲೇಖ (1) ರನ್ವಯ ಸಮಾಪನೆಗೊಳಿಸಿ ಮಾರಾಟಾಧಿಕಾರಿ-1, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಮಂಗಳೂರು ಉಪವಿಭಾಗ, ಮಂಗಳೂರು ಇವರನ್ನು ಸಮಾಪನಾಧಿಕಾರಿಗಳನ್ನಾಗಿ ನೇಮಿಸಲಾಗಿತ್ತು.

ಉಲ್ಲೇಖ (2)ರಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಂಗಳೂರು ಇವರು ಮಾರಾಟಾಧಿಕಾರಿಗಳು ಸದರಿ ಕಛೇರಿಯ ಅಧೀಕ್ಷಕರ ಹುದ್ದೆಯ ಅಧಿಕ ಪ್ರಭಾರದಲ್ಲಿರುವುದರಿಂದ ಹಾಗೂ ಉಳಿ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ (ನಿ) ದಲ್ಲಿನ ಅವ್ಯವಹಾರಗಳಿಗೆ ಸಂಬಂಧಿಸಿದಂತೆ ಕಲಂ 64ರ ವಿಚಾರಣಾಧಿಕಾರಿಯಾಗಿ ವಿಚಾರಣೆ ನಡೆಸುತ್ತಿದ್ದಾರೆ. ಆದ್ದರಿಂದ ಸದರಿಯವರು ಸಮಾಪನಾಧಿಕಾರಿಯಾಗಿ ಕಾರ್ಯ ನಿರ್ವಹಿಸಲು ಅಧಿಕ ಕೆಲಸಗಳ ಒತ್ತಡದಿಂದ ಸಾಧ್ಯವಾಗುವುದಿಲ್ಲ. ಆದ್ದರಿಂದ ಸದರಿ ಸಮಾಪನಾದೇಶವನ್ನು ಮಾರ್ಪಡಿಸಿ ಮಾರಾಟಾಧಿಕಾರಿ-II ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲು ಕೋರಿರುತ್ತಾರೆ.

ಈ ಅಂಶಗಳನ್ನು ಪರಿಶೀಲಿಸಿ ಸಮಾಪನಾಧಿಕಾರಿಯನ್ನು ಬದಲಾಯಿಸುವುದು ಸೂಕ್ತವೆಂದು ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ಸಂ:ಆರ್‌ಸಿಎಸ್/ಎಲ್‌ಕ್ಯೂಡಿ/77/2005-06, ದಿನಾಂಕ: 22ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿ ಹೇಳಿದ ಎಲ್ಲಾ ಅಂಶಗಳನ್ವಯ ಉಲ್ಲೇಖ (1)ರ ಸಮಾಪನಾದೇಶವನ್ನು ಮಾರ್ಪಡಿಸಿ ಮಾರಾಟಾಧಿಕಾರಿಗಳು-I ಇವರ ಬದಲಿಗೆ ಮಾರಾಟಾಧಿಕಾರಿಗಳು-II ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಮಂಗಳೂರು ಉಪವಿಭಾಗ, ಮಂಗಳೂರು ಇವರನ್ನು ಸಮಾಪನಾಧಿಕಾರಿಗಳನ್ನಾಗಿ ನೇಮಕ ಮಾಡಲಾಗಿದೆ.

ಸಮಾಪನಾಧಿಕಾರಿಗಳು ಸಂಘದ ಪ್ರಭಾರವನ್ನು 15 ದಿನಗಳೊಳಗಾಗಿ ಪಡೆದುಕೊಂಡು ಪ್ರಭಾರ ಪಟ್ಟಿ ಸಲ್ಲಿಸತಕ್ಕದ್ದು, ಅಲ್ಲದೆ ಸಂಘದ ಆದ್ಯತಾ ಪಟ್ಟಿಯಂತೆ ಆಸ್ತಿಯು ವಸೂಲಾದಂತೆ ಆದ್ಯತೆ ಮೇಲೆ ಜವಾಬ್ದಾರಿ ತೀರುವಳಿ ಮಾಡಲು ಜರೂರು ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ನನ್ನ ಹಸ್ತಾಕ್ಷರ ಹಾಗೂ ಕಛೇರಿಯ ಮೊಹರಿನೊಂದಿಗೆ ದಿ:22.12.2005 ರಂದು ನೀಡಲಾಗಿದೆ.

ಪಿ.ಆರ್. 30 ಸಹಕಾರ ಸಂಘಗಳ ಹೆಚ್ಚುವರಿ ನಿಬಂಧಕರು, (ಬಳಕೆ ಮತ್ತು ಮಾರಾಟ)

**ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೊಪ್ಪಳ**

**ಪ್ರಕರಣ ಸಂಖ್ಯೆ: ಕಾಅಕೊ:ಕಾನಪ:F489:2005, ದಿನಾಂಕ: 20ನೇ ಡಿಸೆಂಬರ್ 2005**

**ಅರ್ಜಿದಾರರು:**

1. ಶ್ರೀಮತಿ ದುರಗಮ್ಮ ಗಂಡ ಹನುಮಂತ
2. ಮಂಜಪ್ಪ ತಂದೆ ಹನುಮಂತ
3. ದುರಗಪ್ಪ ತಂದೆ ಹನುಮಂತ R/o ಇಂದರಗಿ

**ವಿರುದ್ಧ ಪ್ರತಿವಾದಿಗಳು:**

1. ಹನುಮಪ್ಪ ತಂದೆ ಹಿರೇಸೋಮಪ್ಪ ಸಾ।। ಬುಡ ಶೆಟ್ನಾಳ ತಾ।।ಜಿ।। ಕೊಪ್ಪಳ.
2. ICICI ಲೊಂಬಾರ್ಡ ಮೋಟಾರ್ ಇನ್ಸೂರೆನ್ಸ್ ಕಂ. ಲಿ., ಹುಬ್ಬಳ್ಳಿ

**ಪ್ರಕಟಣೆ**

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ ಶ್ರೀ ಹನುಮಂತ ತಂದೆ ಹನುಮಂತಪ್ಪ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ: 3.8.2005 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ:ಗಾಯ:ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923 ರಡಿ ಪರಿಹಾರ ಧನಕ್ಕಾಗಿ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡ ಮೃತ:ಗಾಯ: ವಾರಸುದಾರರಾದ ಶ್ರೀ:ಶ್ರೀಮತಿ ದುರಗಮ್ಮ ಹಾಗೂ ಇನ್ನಿಬ್ಬರು ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರೂ ಅಥವಾ ತಾವೂ ಸಹ ಮೃತ:ಗಾಯ: ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನದೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದ್ರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿ ಬಾರದಿದ್ದಲ್ಲಿ ಸದ್ರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಕೊಪ್ಪಳ ಜಿಲ್ಲೆ, ಕೊಪ್ಪಳ.

ಪಿ.ಆರ್. 37

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಯಡಿ ಆಯುಕ್ತರು, ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಕಾಅಗ:ಕಾನಪ:F-145/05/984, ದಿನಾಂಕ: 26ನೇ ಡಿಸೆಂಬರ್ 2005**

**ಅರ್ಜಿದಾರರು:**

1. ಹನುಮಂತಪ್ಪ ತಂದೆ ಪರಸಪ್ಪ ನಾಯ್ಕರ ಸಾ।।ಬೆಳದಡಿ ತಾ।। ಗದಗ
2. ಶ್ರೀಮತಿ ಫಕೀರವ್ವ ಕೋಂ ಹನುಮಂತಪ್ಪ ನಾಯ್ಕರ ಸಾ।। ಬೆಳದಡಿ ತಾ।। ಗದಗ

**ವಿರುದ್ಧ ಪ್ರತಿವಾದಿಗಳು:**

1. ಶ್ರೀಮತಿ ಸರ್ವಜೀತಕಾರ್ ಕೋಂ ಮಥಾಡು ನಂ.3040/13, ಕನ್ನಡಶಾಲೆ ಹಿಂದೆ ಬಾದ 2 ಮೋನರವಾಡ ಕಾರವಾರ.
2. ಅರುಣ ತಂದೆ ಪ್ರಭಾಕರ ಬಾಂಧೇಕರ ಸಾ।।ಶಿರವಾಡ ಬಂಗಾರಪ್ಪನಗರ - ಕಾರವಾರ.
3. ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿ., ಶ್ರೀ ಪ್ರಸಾದ್ ಬಿಲ್ಡಿಂಗ್ ಹಳೆ ಚರ್ಚ್ ರೋಡ್ - ಕಾರವಾರ.

**ಪ್ರಕಟಣೆ**

ಅರ್ಜಿದಾರರಾದ ಶ್ರೀ ಹನುಮಂತಪ್ಪ ಪರಸಪ್ಪ ನಾಯ್ಕರ, (2) ಶ್ರೀಮತಿ ಫಕೀರವ್ವ ಕೋಂ ಹನುಮಂತಪ್ಪ ನಾಯ್ಕರ ಇವರು, ತಾವು ಮೃತ ಮಾರುತಿ ಹ. ನಾಯ್ಕರ ಇವರ ತಂದೆ ಮತ್ತು ತಾಯಿ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಮಾರುತಿ ನಾಯ್ಕರ ಇವರು ಒಂದನೇ ಪ್ರತಿವಾದಿಗಳಾದ (1) ಸರ್ವಜೀತಕಾರ ಹಾಗೂ (2) ಅರುಣ ಇವರಲ್ಲಿ ಕೂಲಿ (ಹಮಾಲಿ) ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ಆಶ್ರಿತರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಗದಗ ಜಿಲ್ಲೆ ಗದಗ ಹಾಗೂ ಕಾರ್ಮಿಕ ನಷ್ಟ
ಪರಿಹಾರ ಕಾನೂನು ಅಡಿ ಆಯುಕ್ತರು.

ಪಿ.ಆರ್. 38

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಅಡಿ ಆಯುಕ್ತರು, ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ

**ಸಂಖ್ಯೆ: ಕಾಅಗ:ಕಾನಪ:F-146/05/989, ದಿನಾಂಕ: 26ನೇ ಡಿಸೆಂಬರ್ 2005**

**ಅರ್ಜಿದಾರರು:**
ಅನ್ನಪೂರ್ಣ ಕೋಂ ಶಿದ್ಲಿಂಗಯ್ಯ ಮ್ಯಾಗಲಮನಿ
R/o ಕುಡ್ಲುಂತಿ ತಾ।। ಯಲಬುರ್ಗಾ ಜಿ।। ಕೊಪ್ಪಳ.

**ವಿರುದ್ಧ**

**ಪ್ರತಿವಾದಿಗಳು:**
1. ಸುನೀಲಕುಮಾರ್ ವಿಶ್ವನಾಥ ದೇಸಾಯಿ, R/o ಚಿಕ್ಕಮ್ಯಾಗೇರಿ ತಾ।। ಯಲಬುರ್ಗಾ.
2. ಮರಿಶಾಂತವೀರನಗೌಡ S/o ಹನುಮಂತಗೌಡ ಪಾಟೀಲ R/o ಚಿಕ್ಕಮ್ಯಾಗೇರಿ ತಾ।।ಯಲಬುರ್ಗಾ.
3. ಡಿವಿಜನಲ್ ಮ್ಯಾನೇಜರ್, ನ್ಯಾಷನಲ್ ಇನ್ಸೂರೆನ್ಸ್ ಕಂ.ಲಿ., ಸೂಲಾ ಕಾಂಪ್ಲೆಕ್ಸ್ ಹುಬ್ಬಳ್ಳಿ.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಅನ್ನಪೂರ್ಣ W/o ಶಿದ್ಲಿಂಗಯ್ಯ ಮ್ಯಾಗಲಮನಿ ಇವರು, ತಾವು ಮೃತ ಶಿದ್ಲಿಂಗಯ್ಯ ಕ. ಮ್ಯಾಗಲಮನಿ ಇವರ ಹೆಂಡತಿ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಶಿದ್ಲಿಂಗಯ್ಯ ಇವರು ಒಂದನೇ ಪ್ರತಿವಾದಿಗಳಾದ (1) ಸುನೀಲಕುಮಾರ್, (2) ಮರಿಶಾಂತ ವೀರನಗೌಡ ಇವರಲ್ಲಿ ಹಮಾಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ಆಶ್ರಿತರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಗದಗ ಜಿಲ್ಲೆ ಗದಗ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾನೂನು ಅಡಿ ಆಯುಕ್ತರು.

ಪಿ.ಆರ್. 39

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ ಉಪವಿಭಾಗ-2, ಚಿಕ್ಕಮಗಳೂರು ಜಿಲ್ಲೆ

**ಸಂಖ್ಯೆ: ಕಾಪಕಾ:ಎಫ್:6/2003**

**ಅರ್ಜಿದಾರರು:**
ಶ್ರೀಮತಿ ಅಂಗಡಿ ಲಕ್ಷ್ಮಮ್ಮ ಕೋಂ ಲೇಟ್ ಕರಿಯಪ್ಪ ಉಪ್ಪರಘಟ್ಟ ಗ್ರಾಮ ಹಗರಿಬೊಮ್ಮನಹಳ್ಳಿ ಅಂಚೆ ಬಳ್ಳಾರಿ ಜಿಲ್ಲೆ, ಮತ್ತು ಇತರರು

**ವಿರುದ್ಧ**

**ಪ್ರತಿವಾದಿಗಳು:**
1. ಸೆಂಟ್ ಮರೀಸ್‌ಕಲ್ಲನ್ ಮತ್ತು ಅರೇಕಲ್ ಎಸ್ಟೇಟ್
2. ನ್ಯಾಷನಲ್ ಇನ್ಸ್‌ಷೂರೆನ್ಸ್ ಕಂ. ಲಿ., ಚಿಕ್ಕಮಗಳೂರು.

**ಪ್ರಕಟಣೆ**

ಎಂಬುವವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 19.2.2002 ರಂದು ಅಪಘಾತ ಉಂಟಾಗಿ ಮೃತಪಟ್ಟಿರುವ ಬಗ್ಗೆ ಪರಿಹಾರ ಕೋರಿ ಮೇಲ್ಕಂಡ ಅರ್ಜಿದಾರರು ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಅರ್ಜಿದಾರರನ್ನು ಹೊರತುಪಡಿಸಿ ಮೃತನ ಅವಲಂಬಿತರು ಯಾರು ಇಲ್ಲ ಎಂದು ಪರಿಗಣಿಸಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು.

**ಆರ್.ಬಿ. ಬಾಗೇವಾಡಿ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉಪವಿಭಾಗ-2, ಚಿಕ್ಕಮಗಳೂರು.

ಪಿ.ಆರ್. 40

## ತಹಶೀಲ್ದಾರ್‌ರವರ ಕಾರ್ಯಾಲಯ, ಬೆಂಗಳೂರು ಉತ್ತರ ತಾಲ್ಲೂಕು

**ನಮೂನೆ-27**

**ನಂ.ಎಲ್‌ಎನ್‌ಡಿ:ಸಿಆರ್:545:00-01, ದಿನಾಂಕ: 10ನೇ ನವೆಂಬರ್ 2005**

94ನೇ ನಿಯಮದ 68(1)ನೇ ಪ್ರಕರಣದ ಮೇರೆಗಿನ ಘೋಷಣೆ.

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಕಂಡುಬಂದಿರುವುದರಿಂದ, 1) ಈಗ ಕರ್ನಾಟಕ ಭೂ ಕಂದಾಯ ಅಧಿನಿಯಮದ 1964ರ 68ನೇ ಪ್ರಕರಣದ (1)ನೇ ಉಪ ಪ್ರಕರಣದಿಂದ ಪ್ರಸಿದ್ಧವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸಾರ್ವಜನಿಕ ರಸ್ತೆಯ ಸದರಿ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯ ವಿಲ್ಲವೆಂದು, ತಮ್ಮ ಸಾರ್ವಜನಿಕ ರಸ್ತೆಯ ಸದರಿ ಭಾಗದಲ್ಲಿ ಅಥವಾ ಅದರ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕದೆಂದು ಉದ್ದೇಶಿಸಿ ಈ ಮೂಲಕ ಘೋಷಿಸುತ್ತದೆ.

2) ಸ.ನಂ.57:7ರ ಪಕ್ಕದ ನಂಬರು ಕಾಣದ ಸರ್ಕಾರಿ ಹಳ್ಳದ ಖರಾಬ್ 0-03 ಹಕ್ಕಿನ ಜೊತೆಗೆ ಸದರಿ ಭಾಗದಲ್ಲಿ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುಳ್ಳ ಅಥವಾ ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಯಾವನೇ ಸಾರ್ವಜನಿಕರು ಅಥವಾ ಯಾವನೇ ವ್ಯಕ್ತಿಯು ಈ ಅಧಿಸೂಚನೆಯನ್ನು ಹೊರಡಿಸಿದ ತೊಂಭತ್ತು ದಿನಗಳೊಳಗೆ ಸದರಿ

ಉದ್ದೇಶದ ಬಗ್ಗೆ ತನ್ನ ಅನ್ವೇಷಣೆಗಳನ್ನು ಅಂಥ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂಥ ಹಿತಾಸಕ್ತಿಯ ಅಥವಾ ಹಕ್ಕಿನ ಬಗ್ಗೆ ಸ್ಪಷ್ಟ ಪರಿಹಾರಕ್ಕಾಗಿ ಕ್ಲೇಮು ಮಾಡಲಾದ ಮೊಬಲಗು ಮತ್ತು ವಿವರಗಳನ್ನು ತಹಶೀಲ್ದಾರ್ ಬೆಂಗಳೂರು ಉತ್ತರ ತಾಲ್ಲೂಕು ರವರಿಗೆ ಬರಹದಲ್ಲಿ ತಿಳಿಸತಕ್ಕದ್ದು ಮತ್ತು ಸದರಿ ಆಕ್ಷೇಪಣೆಗಳನ್ನು ಮತ್ತು ಕ್ಲೇಮುಗಳನ್ನು ಸದರಿ ಪ್ರಕರಣದಲ್ಲಿ ಉಪ ಸಂಬಂಧಿಸಿರುವಂತೆ ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರು ಪರಿಶೀಲಿಸತಕ್ಕದ್ದು.

**ಅನುಸೂಚಿ**

| | | | |
|---|---|---|---|
| 1) | ರಸ್ತೆಯ ಭಾಗ ಇತ್ಯಾದಿ ಇರುವ ಗ್ರಾಮ | : | ಶ್ರೀಗಂಧದಕಾವಲ್ |
| 2) | ತಾಲ್ಲೂಕು | : | ಬೆಂ.ಉತ್ತರ ತಾಲ್ಲೂಕು |
| 3) | ಜಿಲ್ಲಾ | : | ಬೆಂಗಳೂರು ಜಿಲ್ಲಾ |
| 4) | ರಸ್ತೆಯ ಮೊದಲಾದುದರ ಭಾಗ ಅಥವಾ ಭಾಗಗಳ ವರ್ಣನೆ | : | ಸ.ನಂ.57:7ರ ಪಕ್ಕದ ನಂಬರು ಕಾಣದ ಸರ್ಕಾರಿ ಹಳ್ಳ ಖರಾಬ್-0-03 |
| 5) | ರಸ್ತೆಯ ಭಾಗ ಅಥವಾ ಭಾಗಗಳ ಸರಿ ಸುಮಾರು ವಿಸ್ತೀರ್ಣ | : | 0-03 ಗುಂಟೆ |

| | | |
|---|---|---|
| ಪೂರ್ವಕ್ಕೆ | : | ಸರ್ಕಾರಿ ಹಳ್ಳ |
| ಪಶ್ಚಿಮಕ್ಕೆ | : | ಬಾಟ್ಲಫ್ಯಾಕ್ಟ್ರಿ |
| ಉತ್ತರಕ್ಕೆ | : | ಮಾಗಡಿ ರಸ್ತೆ |
| ದಕ್ಷಿಣಕ್ಕೆ | : | ಮಾಳಗಾಳು ಗ್ರಾಮದ ಗಡಿ |

ಯಶವಂತಪುರ ಹೋಬಳಿ, ಶ್ರೀಗಂಧದ ಕಾವಲು ಗ್ರಾಮದ ಸ.ನಂ.57:7ರ ಪಕ್ಕದ ನಂಬರು ಕಾಣದ ಸರ್ಕಾರಿ ಖರಾಬ್ 0-03 ಗುಂಟೆ.

ತಹಶೀಲ್ದಾರ್,

ಪಿ.ಆರ್. 41 ಬೆಂಗಳೂರು ಉತ್ತರ ತಾಲ್ಲೂಕು, ಬೆಂಗಳೂರು

## ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು, ಇವರ ನಡವಳಿಗಳು

**ವಿಷಯ:** ಶ್ರೀ ಹೆಚ್.ಎನ್. ರಾಘವೇಂದ್ರ, 'ಡಿ' ವರ್ಗ ನೌಕರ, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಇವರನ್ನು ಸರಗಳ್ಳತನ ಪ್ರಕರಣದಲ್ಲಿ ಬಂಧಿಸಿ ತ್ಯಾಗರಾಜನಗರ ಪೊಲೀಸ್ ಠಾಣೆಯಲ್ಲಿ ಮೊ.ಸಂ. 87/05, ಕಲಂ 392 ಐ.ಪಿ.ಸಿ. ಹಾಗೂ 98/05 ಕಲಂ 392 ಐಪಿಸಿ ಪ್ರಕಾರ ಕೇಸ್ ದಾಖಲಿಸಿರುವ ಬಗ್ಗೆ.

**ಓದಲಾಗಿದೆ:** ಪೊಲೀಸ್ ಇನ್ಸ್‌ಪೆಕ್ಟರ್, ತ್ಯಾಗರಾಜನಗರ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರ ಪತ್ರ ಸಂಖ್ಯೆ: ತ್ಯಾ.ಪೊ/ಮೊ.ಸಂ/ 87/88/05, ದಿನಾಂಕ: 19.12.2005.

**ಪ್ರಸ್ತಾವನೆ:**

ಶ್ರೀ ಹೆಚ್.ಎನ್. ರಾಘವೇಂದ್ರ, 'ಡಿ' ವರ್ಗ ನೌಕರರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು, ಇವರು ತ್ಯಾಗರಾಜನಗರ ಪೊಲೀಸ್ ಠಾಣೆ, ಬೆಂಗಳೂರು ಸಿಟಿ, ಮೊ.ಸಂ. 87/05, ಕಲಂ 392 ಐ.ಪಿ.ಸಿ. ಹಾಗೂ 98/05 ಕಲಂ 392 ಐ.ಪಿ.ಸಿ. ಪ್ರಕರಣಗಳಲ್ಲಿ ಆರೋಪಗಳನ್ನು ಒಪ್ಪಿಕೊಂಡಿರುವುದಾಗಿ ಹಾಗೂ ಬಸವನಗುಡಿ ಪೊಲೀಸ್ ಠಾಣೆ, ಮೊ.ಸಂ. 345/05 ಕಲಂ 392, ಐ.ಪಿ.ಸಿ. ಪ್ರಕರಣದಲ್ಲೂ ಭಾಗಿಯಾಗಿದ್ದಾರೆಂದು ಮೇಲೆ ಓದಲಾದ ಪೊಲೀಸ್ ಇನ್ಸ್‌ಪೆಕ್ಟರ್, ತ್ಯಾಗರಾಜನಗರ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರ ಪತ್ರದ ಮುಖೇನ ತಿಳಿದುಬಂದಿರುತ್ತದೆ. ಹಾಗೂ ಶ್ರೀ ಹೆಚ್.ಎನ್. ರಾಘವೇಂದ್ರ, 'ಡಿ' ವರ್ಗದ ನೌಕರ, ಇವರನ್ನು ದಸ್ತಗಿರಿ ಮಾಡಿ ದಿನಾಂಕ 6.12.2005 ರಂದು ಮಾನ್ಯ 2ನೇ ಎ.ಸಿ.ಎಂ.ಎಂ. ನ್ಯಾಯಾಲಯದ ಮುಂದೆ ಹಾಜರುಪಡಿಸಿದಾಗ ಇವರಿಗೆ ನ್ಯಾಯಾಲಯದ ಬಂಧನಕ್ಕೆ ಆದೇಶವಾಗಿರುತ್ತದೆ ಎಂದು ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು, ಇವರಿಗೆ ಲಿಖಿತ ವರದಿ ಕಳುಹಿಸಿರುತ್ತಾರೆ.

ಈ ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಹೆಚ್.ಎನ್. ರಾಘವೇಂದ್ರ, 'ಡಿ' ವರ್ಗದ ನೌಕರ, ಇವರ ಮೇಲಿನ ಕ್ರಿಮಿನಲ್ ಆರೋಪವು ಮೇಲ್ನೋಟಕ್ಕೆ ಸಾಬೀತಾಗಿರುವುದು ತಿಳಿದು ಬಂದಿರುವುದರಿಂದ ದಿನಾಂಕ: 6.12.2005 ರಿಂದಲೇ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸಲು ತೀರ್ಮಾನಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಕಗ್ಯಾಇ.ಕಸಿಸೇನಿ.1/2005, ದಿನಾಂಕ: 27ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿರುವ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಾವಳಿಗಳು 1957ರ ನಿಯಮ 10ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಹೆಚ್.ಎನ್. ರಾಘವೇಂದ್ರ, 'ಡಿ' ವರ್ಗದ ನೌಕರ, ಮುಖ್ಯ ಸಂಪಾದಕರ ಕಛೇರಿ, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು, ಇವರನ್ನು ಅವರ ವಿರುದ್ದದ ಕ್ರಿಮಿನಲ್ ಮೊಕದ್ದಮೆಗಳ ತೀರ್ಪನ್ನು ಕಾಯ್ದಿರಿಸಿ, ದಿನಾಂಕ: 6.12.2005 ರಿಂದಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಲಾಗಿದೆ.

ಅಮಾನತ್ತಿನ ಅವಧಿಗೆ ಶ್ರೀಯುತರು ನಿಯಮಾನುಸಾರ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ.

**ಎಸ್.ಎ. ಜಿಲಾನಿ**

ಪಿ.ಆರ್. 42 ಮುಖ್ಯ ಸಂಪಾದಕರು,

ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು.

## ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ರವರ ಕಾರ್ಯಾಲಯದ ನಡವಳಿಕೆಗಳು

**ವಿಷಯ:** ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ಶ್ರೀನಿವಾಸಪುರ ಗ್ರಾಮದ ಸ.ನಂ. 17 ರಲ್ಲಿನ 1.20 ಎಕರೆ:ಗುಂಟೆ ಜಮೀನನ್ನು ಮುಸ್ಲಿಂ ಸಮುದಾಯದ ಸ್ಮಶಾನಕ್ಕಾಗಿ ಕಾಯ್ದಿರಿಸುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಪತ್ರದ ಸಂಖ್ಯೆ: ಆರ್.ಡಿ:146 ಎಲ್‌ಜಿಬಿ 2005, ದಿನಾಂಕ: 9.11.2005.
2. ತಹಶೀಲ್ದಾರ್, ಬೆಂಗಳೂರು ಉತ್ತರ (ಅಪರ) ತಾಲ್ಲೂಕು ರವರ ಪತ್ರದ ಸಂಖ್ಯೆ ಎಲ್.ಎನ್.ಡಿ:ಸಿ.ಆರ್:385/ 04-05, ದಿನಾಂಕ:1.1.2005.

**ಪ್ರಸ್ತಾವನೆ:**

ಇಸ್ಲಾಮಿಯ ಟ್ರಸ್ಟ್ (ರಿ), ಕೋಗಿಲು ಬಡಾವಣೆ, ಯಲಹಂಕ ಹೋಬಳಿ, ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಇವರು ದಿನಾಂಕ: 29.11.2004 ರಂದು ಮನವಿ ಸಲ್ಲಿಸಿ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ಶ್ರೀನಿವಾಸಪುರ ಗ್ರಾಮದ ಸ.ನಂ.17 ರಲ್ಲಿನ 1.20 ಎಕರೆ:ಗುಂಟೆ ಜಮೀನನ್ನು ಮುಸ್ಲಿಂ ಸಮುದಾಯದ ಸ್ಮಶಾನಕ್ಕಾಗಿ ಕಾಯ್ದಿರಿಸಲು ಕೋರಿದ್ದು, ತಹಶೀಲ್ದಾರ್, ಬೆಂಗಳೂರು ಉತ್ತರ (ಅಪರ) ತಾಲ್ಲೂಕು ರವರಿಂದ ಉಲ್ಲೇಖ(2)ರ ಪತ್ರದಲ್ಲಿ ವರದಿಯನ್ನು ಪಡೆದು ಈ ಜಮೀನನ್ನು ಕಾಯ್ದಿರಿಸುವ ಬಗ್ಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿದೆ.

ಈ ಕಚೇರಿಯ ಪ್ರಸ್ತಾವನೆಯನ್ನು ಪರಿಶೀಲಿಸಿ ಉಲ್ಲೇಖ (1)ರ ಸರ್ಕಾರದ ಪತ್ರದಲ್ಲಿ ಯಲಹಂಕ ಹೋಬಳಿ, ಶ್ರೀನಿವಾಸಪುರ ಗ್ರಾಮದ ಸ.ನಂ.17 ರಲ್ಲಿನ 1.20 ಎಕರೆ:ಗುಂಟೆ ಜಮೀನನ್ನು ಸ್ಮಶಾನಕ್ಕಾಗಿ ಕಾಯ್ದಿರಿಸಲು ಕರ್ನಾಟಕ ಭೂ ಕಂದಾಯ ನಿಯಮಗಳು 1966 ಕಲಂ 94(4) ರಡಿ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಕಲಂ 71 ರಡಿ ಮುಸ್ಲಿಂ ಸಮುದಾಯದ ಸ್ಮಶಾನಕ್ಕಾಗಿ ಕಾಯ್ದಿರಿಸಲು ಹಾಗೂ ಸದರಿ ಸ್ಮಶಾನದ ಉಸ್ತುವಾರಿಯನ್ನು ಸಂಬಂಧಿಸಿದ ಗ್ರಾಮಪಂಚಾಯಿತಿಗೆ ವಹಿಸಲು ಸರ್ಕಾರದ ಪೂರ್ವಾನುಮೋದನೆಯನ್ನು ನೀಡಲಾಗಿದೆ.

**ಆದೇಶ ನಂ.ಎಲ್.ಎನ್.ಡಿ (ಎನ್.ಎ) ಸಿ.ಆರ್:126/04-05, ದಿನಾಂಕ: 9ನೇ ಡಿಸೆಂಬರ್ 2005**

ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ಶ್ರೀನಿವಾಸಪುರ ಗ್ರಾಮದ ಸ.ನಂ.17 ರಲ್ಲಿನ 1.20 ಎಕರೆ:ಗುಂಟೆ ಸರ್ಕಾರಿ ಗೋಮಾಳ ಜಮೀನನ್ನು ಭೂ ಕಂದಾಯ ನಿಯಮಗಳು 1966ರ ಕಲಂ 94(4) ರಡಿ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ ಕರ್ನಾಟಕ ಭೂ ಕಂದಾಯ ನಿಯಮ 1964ರ ಕಲಂ 71 ರಡಿ 1.20 ಎಕರೆ:ಗುಂಟೆ ಪ್ರದೇಶವನ್ನು ಮುಸ್ಲಿಂ ಸಮುದಾಯದ ಸ್ಮಶಾನಕ್ಕಾಗಿ ಕಾಯ್ದಿರಿಸಿದೆ. ಹಾಗೂ ಸದರಿ ಸ್ಮಶಾನದ ಉಸ್ತುವಾರಿಯನ್ನು ಸಂಬಂಧಿಸಿದ ಗ್ರಾಮಪಂಚಾಯಿತಿಗೆ ವಹಿಸಿ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಆದೇಶಿಸಿದೆ.

**ಷರತ್ತುಗಳು**

1. ಸದರಿ ಜಮೀನನ್ನು ಯಾವ ಉದ್ದೇಶಕ್ಕಾಗಿ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಬಳಸತಕ್ಕದ್ದು ಯಾವುದೇ ಕಾರಣಕ್ಕೂ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
2. ಸದರಿ ಜಮೀನು ಮಂಜೂರಾತಿಯಾದ ಉದ್ದೇಶಕ್ಕೆ ಅವಶ್ಯಕವಿಲ್ಲವೆಂದು ಕಂಡು ಬಂದಲ್ಲಿ ಕಂದಾಯ ಇಲಾಖೆಗೆ ಹಿಂತಿರುಗಿಸತಕ್ಕದ್ದು.
3. ಸದರಿ ಮಂಜೂರು ಮಾಡಿರುವ ಜಮೀನನ್ನು ಬೇರೆ ಸಂಸ್ಥೆ : ಇಲಾಖೆಗೆ ವರ್ಗಾಯಿಸುವಂತಿಲ್ಲ.
4. ಒಂದು ವೇಳೆ ಸದರಿ ಜಮೀನು ಯಾವುದೇ ಸಾರ್ವಜನಿಕ ಉದ್ದೇಶಕ್ಕೆ ಅಗತ್ಯವೆಂದು ಕಂಡು ಬಂದಲ್ಲಿ ಈ ಆದೇಶವನ್ನು ಹಿಂದಕ್ಕೆ ಪಡೆಯಲಾಗುವುದು.
5. ಸದರಿ ಜಮೀನಿಗೆ ಮೋಜಣಿದಾರರು ತಯಾರಿಸಿರುವ ನಕ್ಷೆಯಂತೆ ಚಕ್ಕುಬಂದಿ ನಿರ್ಧರಿಸಿದ ನಂತರ ಸಂಬಂಧಪಟ್ಟ ಗ್ರಾಮ ಪಂಚಾಯ್ತಿಗೆ ಹಸ್ತಾಂತರಿಸುವುದು.
6. ಅರ್ಜಿತ ಸಂಸ್ಥೆಗೆ ಜಮೀನಿನ ಮೇಲೆ ಯಾವುದೇ ಹಕ್ಕು ಇರುವುದಿಲ್ಲ.
7. ಸ್ಮಶಾನದಲ್ಲಿ ಯಾವುದೇ ಕಟ್ಟಡ ಅಥವಾ ಇತರೆ ಯಾವುದಾದರೂ ಕಾರ್ಯವನ್ನು ನಿರ್ವಹಿಸಬೇಕಾದಲ್ಲಿ ತಹಶೀಲ್ದಾರ್‌ರವರ ಪೂರ್ವಾನುಮತಿ ಪಡೆದು ನಿರ್ವಹಿಸತಕ್ಕದ್ದು.
8. ಮೇಲ್ಕಂಡ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಸದರಿ ಆದೇಶವನ್ನು ರದ್ದುಪಡಿಸಲಾಗುವುದು.

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್. 43

**ಇಂಧನ ಇಲಾಖೆ**

**ತಿದ್ದುಪಡಿ**

**ಸಂಖ್ಯೆ: ಇಎನ್ 371 ಎನ್‌ಸಿಇ 2005, ಬೆಂಗಳೂರು, ದಿನಾಂಕ: 26ನೇ ಡಿಸೆಂಬರ್ 2005**

ದಿನಾಂಕ: 30.9.2005 ರಂದು ನಡೆದ ಹಂಚಿಕೆ ಸಮಿತಿ ಸಭೆಯಲ್ಲಿ ಅನುಮೋದನೆಯಾಗಿದ್ದು, ಹೊರಡಿಸಲಾದ ಸರ್ಕಾರಿ ಆದೇಶದಲ್ಲಿ ಎಲ್ಲಾ ಪವನ/ಕಿರುಜಲ ಮತ್ತು ಜೈವಿಕ ಅಸಂಪ್ರದಾಯಿಕ ಇಂಧನ ಮೂಲಗಳ ಹಂಚಿಕೆ ಆದೇಶಗಳ ಷರತ್ತಿನಲ್ಲಿನ

"ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವೀಲಿಂಗ್ ಮತ್ತು ಬ್ಯಾಂಕಿಂಗ್/ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ"

**ಎಂಬುದಕ್ಕೆ ಬದಲಾಗಿ**

"ಸಂಬಂಧಿಸಿದ ವಿದ್ಯುತ್ ವಿತರಣಾ ಸಂಸ್ಥೆಗಳೊಂದಿಗೆ (ಎಸ್ಕಾಂ) ಬ್ಯಾಂಕಿಂಗ್ / ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ (ಪಿಪಿಎ)"

**ಎಂದು ಓದಿಕೊಳ್ಳತಕ್ಕದ್ದು.**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ.ಆರ್. 44

**HEALTH AND FAMILY WELFARE DEPARTMENT**
**CORRIGENDUM**
**No. HFW 408 MPS 2005, Bangalore, Dated 30th December 2005**

In the Annexure to Government Order No. HFW 408 MPS 2005, dated 21.12.2005 under item 2(a) the following shall be substituted;

"2 (a) 'Admission Centre' means, the center at which selection and allotment of candidates as per merit is done by centralized counseling through single window system to various courses in Private Un-

aided Minority and Non-Minority and in Deemed University colleges having PG Degree and Diploma courses in Medicine and Dentistry in Karnataka.

By Order and in the name of the Governor of Karnataka,
**D.V. PRASAD**
Secretary to Government,
Health & Family Welfare Department. (Medical Education)

P.R. 45

**ವಾಣಿಜ್ಯ ತೆರಿಗೆಗಳ ಇಲಾಖೆ**

**ವಾಣಿಜ್ಯ ತೆರಿಗೆ ಆಯುಕ್ತರ ಕಛೇರಿ, ವಾಣಿಜ್ಯ ತೆರಿಗೆ ಕಾರ್ಯಾಲಯ, ಬೆಂಗಳೂರು**

**ಅಧಿಸೂಚನೆ-I ಸಂಖ್ಯೆ:ಎಂಎಸ್‌ಸಿ:ಸಿಆರ್:55/05-06, ದಿನಾಂಕ: 29ನೇ ಡಿಸೆಂಬರ್ 2005**

ಕೇಂದ್ರ ಮಾಹಿತಿ ಹಕ್ಕು ಅಧಿನಿಯಮ, 2005ರ ಸೆಕ್ಷನ್ 4 (1) (ಬಿ) ಅಡಿಯಲ್ಲಿ ನಮೂದಾಗಿರುವ 17 ಅಂಶಗಳ ಮೇಲೆ ವಾಣಿಜ್ಯ ತೆರಿಗೆಗಳ ಇಲಾಖೆಗೆ ಸಂಬಂಧಪಟ್ಟ ಈ ಕೆಳಗೆ ಕಾಣಿಸಿದ ವಿಷಯಗಳ ಸಂಪೂರ್ಣ ಮಾಹಿತಿಯನ್ನು ಅನುಬಂಧದಲ್ಲಿ ವಿವರಿಸಲಾಗಿದ್ದು ಸದರಿ ಮಾಹಿತಿಗಳನ್ನು ಸಾರ್ವಜನಿಕರ ಗಮನಕ್ಕೆ ತರಲಾಗಿದೆ.

| ಕ್ರ. ಸಂ. | ವಿಷಯ |
|---|---|
| I. | ವಾಣಿಜ್ಯ ತೆರಿಗೆ ಇಲಾಖೆಯ ರೂಪುರೇಷೆ |
| II. | ಇಲಾಖೆಯ ಅಧಿಕಾರಿಗಳು ಮತ್ತು ಸಿಬ್ಬಂದಿ ವರ್ಗದವರ ಅಧಿಕಾರ, ಜವಾಬ್ದಾರಿ ಮತ್ತು ಕರ್ತವ್ಯಗಳು |
| III. | ತೀರ್ಮಾನ ತೆಗೆದುಕೊಳ್ಳುವ ವಿಷಯಗಳಲ್ಲಿ ಅನುಸರಿಸುವ ವಿಧಾನ, ಮೇಲ್ವಿಚಾರಣೆಯ ಹಂತಗಳು ಮತ್ತು ಹೊಣೆಗಾರಿಕೆ |
| IV. | ಇಲಾಖೆಯ ಕರ್ತವ್ಯನಿರ್ವಹಣೆಗಾಗಿ ನಿಗಧಿಪಡಿಸಿರುವ ಸೂತ್ರಗಳು |
| V. | ಇಲಾಖೆಯ ಅಧಿಕಾರಿ ಹಾಗೂ ಸಿಬ್ಬಂದಿವರ್ಗದವರು ಕರ್ತವ್ಯ ನಿರ್ವಹಣೆಗಾಗಿ ಪಾಲಿಸಬೇಕಾದ ನಿಯಮಗಳು, ಸುತ್ತೋಲೆಗಳು, ನಿಬಂಧನೆಗಳು, ಸೂಚನೆಗಳು, ಕೈಪಿಡಿಗಳು ಮತ್ತು ದಾಖಲೆಗಳು. |
| VI. | ಇಲಾಖೆಯ ನಿಯಂತ್ರಣದಲ್ಲಿರುವ ವಿವಿಧ ದಾಖಲೆಗಳ ಪಟ್ಟಿ |
| VII. | ಇಲಾಖೆಯ ಕಾರ್ಯನೀತಿ ಬಗ್ಗೆ ಸಾರ್ವಜನಿಕ ಪ್ರತಿನಿಧಿಗಳ ಪಾಲ್ಗೊಳ್ಳುವ ವಿಷಯ ಸಂಬಂಧ ಇರುವ ವ್ಯವಸ್ಥೆಯ ವಿವರ. |
| VIII. | ಇಲಾಖೆಯ ಆಡಳಿತಕ್ಕಾಗಿ ಸಲಹಾರೂಪದ ಮಂಡಳಿ, ಪರಿಷತ್ತು ಅಥವಾ ಎರಡು ಅಥವಾ ಹೆಚ್ಚಿನ ಸದಸ್ಯರನ್ನೊಳಗೊಂಡ ಸಮಿತಿಗಳ, ಸಭೆಗಳಲ್ಲಿ ಸಾರ್ವಜನಿಕರು ಪಾಲ್ಗೊಳ್ಳಬಹುದಾದ ಅಥವಾ ಸಭೆಯ ನಡವಳಿಗಳು ಸಾರ್ವಜನಿಕರಿಗೆ ನೀಡಬಹುದಾದ ವ್ಯವಸ್ಥೆಯ ವಿವರಗಳು. |
| IX. | ಇಲಾಖೆಯ ಅಧಿಕಾರಿ ಹಾಗೂ ಸಿಬ್ಬಂದಿ ವರ್ಗದವರ ಪಟ್ಟಿ |
| X. | ಪ್ರತಿಯೊಬ್ಬ ಅಧಿಕಾರಿ ಹಾಗೂ ಸಿಬ್ಬಂದಿವರ್ಗದವರು ಪಡೆಯುವ ಮಾಸಿಕ ವೇತನಗಳ ವಿವರ |
| XI. | ಇಲಾಖೆಯ ಆಯವ್ಯಯದ ವಿವರ. |
| XII. | ಇಲಾಖೆಯಿಂದ ಸಹಾಯಧನ ಪಡೆಯುವ ಕಾರ್ಯಯೋಜನೆಗಳು ಹಾಗೂ ಫಲಾನುಭವಿಗಳ ವಿವರ. |
| XIII. | ರಿಯಾಯಿತಿಗಳನ್ನು ಪಡೆಯುವ ಕಾರ್ಯಯೋಜನೆಗಳ ಅನುಷ್ಠಾನದ ವಿಧಾನ, ಸಹಾಯಧನದ ಮೊತ್ತ ಹಾಗೂ ಫಲಾನುಭವಿಗಳ ವಿವರ |
| XIV. | ವಿದ್ಯುನ್ಮಾನ ವ್ಯವಸ್ಥೆಗೆ ಅಳವಡಿಸಿದ ಇಲಾಖೆಯ ಮಾಹಿತಿಗಳು |
| XV. | ನಾಗರೀಕರು ಮಾಹಿತಿಯನ್ನು ಪಡೆಯಲು, ವಾಚನಾಲಯದ ವ್ಯವಸ್ಥೆಯನ್ನು ಸೇರಿ, ಇರುವ ವ್ಯವಸ್ಥೆಗಳ ವಿವರ ಮತ್ತು ಕೆಲಸದ ವೇಳೆ |
| XVI. | ಸಾರ್ವಜನಿಕ ಸಂಪರ್ಕಾಧಿಕಾರಿಗಳ ಹೆಸರು, ಪದನಾಮ ಮತ್ತಿತರ ವಿವರಗಳು. |
| XVII. | ನಿಗದಿಪಡಿಸಲಾಗಿರುವ ಇತರ ಯಾವುದೇ ಮಾಹಿತಿ. |

**ಪಿ. ರವಿಕುಮಾರ್**
ವಾಣಿಜ್ಯ ತೆರಿಗೆಗಳ ಆಯುಕ್ತರು.

**ಅಧಿಸೂಚನೆ-II**

**ಸಂಖ್ಯೆ:ಎಂಎಸ್‌ಸಿ:ಸಿಆರ್:55/05-06, ದಿನಾಂಕ: 29ನೇ ಡಿಸೆಂಬರ್ 2005**

ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ:ಆಇ 184 ಸಮಯ 2005 ದಿನಾಂಕ:22.9.2005ರ ಪ್ರಕಾರ ಸಾರ್ವಜನಿಕ ಪ್ರಾಧಿಕಾರವೆಂದು ಪರಿಗಣಿತವಾದ ಈ ಕೆಳಗೆ ಸಹಿ ಮಾಡಿದ ಅಧಿಕಾರಿಯು 2005ರ ಮಾಹಿತಿ ಹಕ್ಕು ಕಾಯ್ದೆ (2005ರ ಕೇಂದ್ರ ಕಾಯ್ದೆ ಸಂಖ್ಯೆ:22)ಯ ಸೆಕ್ಷನ್ 5(1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ವಾಣಿಜ್ಯ ತೆರಿಗೆಗಳ ಇಲಾಖೆಗೆ ಸಂಬಂಧಿಸಿದಂತೆ, ವಾಣಿಜ್ಯ ತೆರಿಗೆಗಳ ಇಲಾಖೆಯ ಎಲ್ಲಾ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರುಗಳು/ಉಪ ಆಯುಕ್ತರುಗಳು ಸಂಬಂಧಪಟ್ಟ ವಿಷಯಗಳ ಮಾಹಿತಿಯನ್ನು ಕೋರುವ ವ್ಯಕ್ತಿಗಳಿಗೆ ಮಾಹಿತಿಯನ್ನು ಮೇಲಿನ ಕಾಯ್ದೆಯನ್ವಯ ಒದಗಿಸಲು "ಸಾರ್ವಜನಿಕ ಮಾಹಿತಿ ಅಧಿಕಾರಿಗಳನ್ನಾಗಿ" ನೇಮಕ ಮಾಡಲಾಗಿದೆ.

ಮಾಹಿತಿ ಹಕ್ಕು ಅಧಿನಿಯಮ 2005ರ ಸೆಕ್ಷನ್ 5ರ ಉಪ ಕಲಂ 2ರನ್ವಯ ವಾಣಿಜ್ಯ ತೆರಿಗೆಗಳ ಇಲಾಖೆಯ ಎಲ್ಲಾ ವಾಣಿಜ್ಯ ತೆರಿಗೆ ಅಧಿಕಾರಿಗಳನ್ನು ತಮ್ಮ ಶಾಖೆಗೆ ಸಂಬಂಧಪಡುವ ವಿಷಯಗಳಿಗೆ ಮಾಹಿತಿ ಕೋರುವ ಅರ್ಜಿಗಳನ್ನು ಅಥವಾ ಮೇಲ್ಮನವಿಗಳನ್ನು ಸ್ವೀಕರಿಸಲು "ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿಗಳನ್ನಾಗಿ" ನೇಮಕ ಮಾಡಲಾಗಿದೆ.

ಮಾಹಿತಿ ಹಕ್ಕು ಅಧಿನಿಯಮ 2005ರ ಸೆಕ್ಷನ್ 19(1)ರ ಅಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಲು ಇಲಾಖೆಯ ವಿಭಾಗಮಟ್ಟದಲ್ಲಿರುವ ಎಲ್ಲಾ ವಾಣಿಜ್ಯ ತೆರಿಗೆ ಜಂಟಿ ಆಯುಕ್ತರುಗಳು ಇವರನ್ನು ಕಾಯ್ದೆಯಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಲು "ಮೇಲ್ಮನವಿ ಪ್ರಾಧಿಕಾರ" ಎಂದು ನೇಮಕ ಮಾಡಲಾಗಿದೆ.

**ಪಿ. ರವಿಕುಮಾರ್**
ವಾಣಿಜ್ಯ ತೆರಿಗೆಗಳ ಆಯುಕ್ತರು.

ಪಿ.ಆರ್. 46

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಚಿತ್ರದುರ್ಗ

### ನಂ ಡಿಆರ್‌ಡಿ:ಡಿಡಿಎಸ್:ಅಧಿಭಾರ ಅರ್ಜಿ:1:05-06, ದಿನಾಂಕ: 19ನೇ ಡಿಸೆಂಬರ್ 2005

**ವಿಷಯ:** ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 103 (2)ರನ್ವಯ ತೀರ್ಪು ಪೂರ್ವ ಜಪ್ತಿಯ ಆದೇಶ ನೀಡುವ ಬಗ್ಗೆ.

**ಉಲ್ಲೇಖ:** ವ್ಯವಸ್ಥಾಪಕರು ಚಿತ್ರದುರ್ಗ ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ. ಚಿತ್ರದುರ್ಗ ಇವರು ಸಲ್ಲಿಸಿರುವ ಅರ್ಜಿ ಕ್ರಮಾಂಕ: ಪಿಸಿಎಆರ್‌ಡಿ ಬ್ಯಾಂಕ್ : ಸಿಟಿಎ:164:05-06 ದಿನಾಂಕ: 22.9.2005.

**ಪ್ರಸ್ತಾವನೆ:**

ಚಿತ್ರದುರ್ಗ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ. ಚಿತ್ರದುರ್ಗ ಇದರ 2003-04ನೇ ಸಾಲಿನ ಲೆಕ್ಕ ಪರಿಶೋಧನಾ ವರದಿಯನ್ನು ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ವರದಿಯನ್ವಯ ಬ್ಯಾಂಕಿನಲ್ಲಿ ವ್ಯವಸ್ಥಾಪಕರಾಗಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಸಾಯಿರಾಂ ಸಿಂಗ್ ಇವರು ರೂ.2,06,722-00 ಗಳ ಹಣದುರುಪಯೋಗ ಪಡಿಸಿರುವುದು ಬೆಳಕಿಗೆ ಬಂದಿದ್ದು, ಈ ದುರುಪಯೋಗದ ಹಣಕ್ಕೆ ಶ್ರೀ ಸಾಯಿರಾಂಸಿಂಗ್ ಇವರನ್ನು ಜವಾಬ್ದಾರರನ್ನಾಗಿ ಗುರುತಿಸಿರುವುದರಿಂದ ಈ ದುರುಪಯೋಗದ ಹಣವನ್ನು ಸದರಿಯವರಿಂದ ವಸೂಲಿ ಮಾಡಿಕೊಳ್ಳಲು ಆದೇಶ ನೀಡಬೇಕೆಂದು ಕೋರಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 69 ರಡಿಯಲ್ಲಿ ಅಧಿಭಾರ ಅರ್ಜಿಯನ್ನು ಉಲ್ಲೇಖಿತ ಪತ್ರದ ಮೂಲಕ ಸಲ್ಲಿಸಿರುತ್ತಾರೆ.

ಸದರಿ ಅಧಿಭಾರ ಅರ್ಜಿಯು ಇತ್ಯಾರ್ಥವಾಗುವ ಪೂರ್ವದಲ್ಲಿ ಕಾಯ್ದೆಯ ಕಲಂ 103 ರಡಿಯಲ್ಲಿ ಜಪ್ತಿ ಆದೇಶ ನೀಡಬೇಕೆಂದು ಅರ್ಜಿಯನ್ನು ಸಹ ಸಲ್ಲಿಸಿರುತ್ತಾರೆ.

ಅರ್ಜಿದಾರರು ಸಲ್ಲಿಸಿರುವ ಕಲಂ 103 ರಡಿಯ ಅರ್ಜಿಯ ಮೂಲಕ ಆರೋಪಿತ ನೌಕರರ ಕುಟುಂಬದವರ (ಪತ್ನಿಯ) ಹೆಸರಿನಲ್ಲಿ ವಾಸದ ಮನೆಯುಳ್ಳ ಸ್ಥಿರಾಸ್ತಿಯನ್ನು ಹೊಂದಿದ್ದು, ಅಧಿಭಾರ ಅರ್ಜಿ ಪ್ರಕರಣ ಇತ್ಯರ್ಥವಾಗಿ ಆದೇಶ ನೀಡುವ ಪೂರ್ವದಲ್ಲಿ ಮಾರಾಟ / ಪರಭಾರೆ ಮಾಡುವ ಸಾಧ್ಯತೆಗಳಿರುವುದರಿಂದ ಸದರಿ ಸ್ಥಿರಾಸ್ತಿಯನ್ನು ಪರಭಾರೆ ಮಾಡದಂತೆ ಜಪ್ತಿ ಮಾಡಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

ಅರ್ಜಿದಾರರ ಕೋರಿಕೆಯನ್ನು ಪರಿಗಣಿಸಿ ಶ್ರೀ ಸಾಯಿರಾಂಸಿಂಗ್ ಇವರು ಅಧಿಭಾರ ಪ್ರಕರಣದಲ್ಲಿ ಹೊಂದಿರುವ ರೂ. 2,06,722-00 ಗಳಿಗೆ ಸಾಕಷ್ಟು ಭದ್ರತೆ ಕೊಡಲು ಹಾಗೂ ಭದ್ರತೆ ಕೊಡದೇ ಇದ್ದ ಪಕ್ಷದಲ್ಲಿ ಕೆಳ ಕಾಣಿಸಿದ ಷೆಡ್ಯೂಲ್‌ನಲ್ಲಿ ವಿವರಿಸಿರುವ ವಿಶಿಷ್ಟ ಆಸ್ತಿಯನ್ನು ಜಪ್ತಿ ಮಾಡಲು ಆದೇಶ ನೀಡುವ ಹಿನ್ನೆಲೆಯಲ್ಲಿ ಅಧಿಭಾರ ಪ್ರಕರಣದಲ್ಲಿನ ಎದುರು ಅರ್ಜಿದಾರರಿಗೆ ಕಲಂ 103 (2)ರ ಪ್ರಕಾರ ಈ ಕೆಳಕಂಡಂತೆ ನೋಟೀಸು ನೀಡಲಾಗಿದೆ.

### ನೋಟೀಸು

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 103 (2) ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69: ಸಿಎಲ್ಎಂ:2001 ದಿನಾಂಕ:21.11.2001 ರನ್ವಯ ದತ್ತವಾದ ಅಧಿಕಾರದ ಮೇರೆಗೆ ಶ್ರೀಮತಿ ಸುನಂದಮ್ಮ ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಆದ ನಾನು ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಚಿತ್ರದುರ್ಗ ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ. ಚಿತ್ರದುರ್ಗ ಇದರ ವ್ಯವಸ್ಥಾಪಕರು ನಿಮ್ಮ ವಿರುದ್ಧ ದಾಖಲಿಸಿರುವ ಕಾಯ್ದೆ ಕಲಂ 69 ರಡಿಯಲ್ಲಿನ ಅಧಿಭಾರ ಪ್ರಕರಣದಲ್ಲಿ ಒಳಗೊಂಡಿರುವ ಮೊತ್ತ ರೂ. 2,06,722-00 ಗಳಿಗೆ ಸಮನಾದ ಮೊಬಲಗು ರೂ. 2,06,722-00 ಗಳ ನಗದು ಹಣವನ್ನು ಅಥವಾ ಅಷ್ಟು ಬೆಲೆಯ ಜಾಮೀನು ರೂಪದ ಭದ್ರತೆಯನ್ನು ಈ ನೋಟೀಸು ತಲುಪಿದ 15 ದಿನಗಳ ಒಳಗಾಗಿ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ (ಡಿ.ಸಿ.ಸಿ. ಬ್ಯಾಂಕ್ ನಿ.) ನಿ ಇದರ ಚಿತ್ರದುರ್ಗ ಟೌನ್ ಶಾಖೆಯಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರು ಚಿತ್ರದುರ್ಗ ಇವರ ಹೆಸರಿನಲ್ಲಿ ವಿಶೇಷ ಠೇವಣಿ ರೂಪದಲ್ಲಿ ಸಂದಾಯಿಸಿ ಠೇವಣಿ ಮಾಡಿದ ರಶೀದಿ ಅಥವಾ ಚಲನ್‌ಗಳನ್ನು ಈ ಕಛೇರಿಗೆ ಈ ಕೆಳಗೆ ಸಹಿ ಮಾಡಿದ ಅಧಿಕಾರಿಗಳ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ತಪ್ಪಿದಲ್ಲಿ ಈ ಜಪ್ತಿ ಆದೇಶವನ್ನು ಸ್ಥಿರೀಕರಿಸಲ್ಪಡಲಾಗುವುದೆಂದು ತಿಳಿಯತಕ್ಕದ್ದು.

### ಸ್ಥಿರಾಸ್ತಿಯ ಷೆಡ್ಯೂಲ್

ಮೈಸೂರು ಮಹಾ ನಗರ ಪಾಲಿಕೆ ವ್ಯಾಪ್ತಿಗೊಳಪಟ್ಟಿರುವ ವಾರ್ಡ್ ಸಂಖ್ಯೆ ಮತ್ತು ಮೊಹಲ್ಲಾ ದೇವರಾಜ 3/4 ರಲ್ಲಿರುವ ಆಸ್ತಿ ತೆರಿಗೆ ರಿಜಿಸ್ಟರ್ ಸಂಖ್ಯೆ ಹಾಗೂ ಪುಟ ಸಂಖ್ಯೆ ಎಲ್. 31/ಎ.ಪಿ. .034ರಂತೆ ಇರುವ ನಿವೇಶನ ನಂ. 328 1ನೇ ಹಂತ ವಿಜಯನಗರ ಮೈಸೂರು ಇದರಲ್ಲಿರುವ 60 X 40 ಅಡಿಗಳುಳ್ಳ ಸ್ಥಿರಾಸ್ಥಿಯಲ್ಲಿರುವ ವಾಸದ ಮನೆ.

ಮೇಲ್ಕಂಡ ಸ್ಥಿರಾಸ್ತಿಯನ್ನು ಯಾರಾದರೂ ಕ್ರಯಕ್ಕೆ ಅಥವಾ ಇನ್ನಿತರೆ ಯಾವುದೇ ರೂಪದಲ್ಲಿ ಪಡೆದು ವರ್ಗಾವಣೆ ಮಾಡಿಕೊಂಡಲ್ಲಿ ಈ ಪ್ರಕರಣದಲ್ಲಿ ತೀರ್ಪು / ಆದೇಶ ಪೂರ್ವದಲ್ಲಿ ನೀಡಲಾದ ಜಪ್ತಿ ಆದೇಶಕ್ಕೆ ಒಳಪಟ್ಟಿರತಕ್ಕದ್ದೆಂದು ಭಾವಿಸತಕ್ಕದ್ದು.

ಈ ನೋಟೀಸನ್ನು ನನ್ನ ಸ್ವಹಸ್ತ ಸಹಿ ಹಾಗೂ ಕಛೇರಿಯ ಮೊಹರಿನೊಂದಿಗೆ ದಿನಾಂಕ: 19.12.2005 ರಂದು ನೀಡಲಾಗಿದೆ.

ಪಿ.ಆರ್. 47 ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

## DIRECTORATE OF ECONOMICS AND STATISTICS, BANGALORE-1,

### Consumer Price Index Numbers for Industrial Workers

**No. DES 23 PWX 2005** **Month : Oct 2005**

**State : Karnataka.** **Base : 1987-88=100** **Date : 28-12-2005**

| | Group/Sub-Group | Bell-ary | Bhad--ra-Vathi | Da-van-gere | Dan-deli | Gul-Bar-Ga | Hari-har | Has-san | Man-dya | Man-ga-lore | My-sore | Rai-chur | Tum-kur |
|---|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| I. | **FOOD**: | | | | | | | | | | | | |
| | (a) Cereals & Products | 336 | 388 | 371 | 336 | 365 | 352 | 341 | 361 | 292 | 376 | 331 | 390 |

| | 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
|---|---|---|---|---|---|---|---|---|---|---|---|---|---|
| | (b) Pulses & Products | 312 | 346 | 334 | 373 | 313 | 311 | 341 | 334 | 329 | 313 | 302 | 315 |
| | (c) Oil & Fats | 249 | 246 | 242 | 247 | 262 | 252 | 260 | 256 | 231 | 259 | 259 | 258 |
| | (d) Meat, Fish & Eggs | 347 | 355 | 363 | 438 | 408 | 341 | 336 | 375 | 533 | 409 | 400 | 349 |
| | (e) Milk & Products | 338 | 262 | 328 | 323 | 306 | 267 | 251 | 342 | 289 | 257 | 307 | 281 |
| | (f) Condiments & Spices | 255 | 363 | 385 | 412 | 312 | 313 | 326 | 273 | 283 | 381 | 287 | 301 |
| | (g) Vegetables & Fruits | 276 | 357 | 352 | 417 | 304 | 326 | 349 | 486 | 343 | 367 | 255 | 491 |
| | (h) Other Food | 295 | 381 | 356 | 370 | 313 | 312 | 325 | 308 | 286 | 308 | 331 | 348 |
| | **FOOD GROUP INDEX** | **311** | **351** | **351** | **358** | **331** | **315** | **321** | **349** | **330** | **334** | **318** | **352** |
| II. | Pan, Supari, Tobacco & Intoxicants | 311 | 344 | 349 | 335 | 386 | 447 | 349 | 475 | 295 | 323 | 359 | 374 |
| III. | Fuel & Light | 316 | 321 | 303 | 457 | 292 | 326 | 354 | 333 | 272 | 310 | 446 | 289 |
| IV. | Housing | 100 | 100 | 100 | 100 | 100 | 100 | 100 | 100 | 100 | 100 | 100 | 100 |
| V. | Clothing, Bedding & Footwear | 255 | 255 | 227 | 373 | 277 | 266 | 347 | 382 | 242 | 295 | 431 | 214 |
| VI. | **Miscellaneous** : | | | | | | | | | | | | |
| | (a) Medical Care | 585 | 511 | 372 | 291 | 285 | 268 | 384 | 324 | 361 | 313 | 394 | 216 |
| | (b) Education, Recreation & Amusement | 351 | 337 | 516 | 217 | 391 | 483 | 354 | 293 | 364 | 462 | 377 | 326 |
| | (c) Transport & Communication | 414 | 406 | 332 | 526 | 595 | 409 | 365 | 561 | 458 | 579 | 388 | 440 |
| | (d) Personal Care & effects | 256 | 280 | 254 | 278 | 315 | 257 | 293 | 290 | 268 | 315 | 269 | 273 |
| | (e) Others | 334 | 358 | 282 | 430 | 298 | 273 | 252 | 286 | 236 | 330 | 426 | 243 |
| | Miscellaneous Group | 371 | 348 | 332 | 328 | 350 | 323 | 321 | 306 | 325 | 400 | 364 | 285 |
| | **GENERAL INDEX** | **292** | **311** | **303** | **337** | **298** | **289** | **301** | **319** | **294** | **305** | **323** | **279** |
| | To convert to Base 1960 Multiply by Linking Factor. | 7.39 | 9.19 | 8.27 | ... | 8.26 | 8.56 | 9.25 | 7.92 | 9.31 | 9.05 | ... | ... |

for Director,

**GOVERNMENT OF INDIA**
**MINISTRY OF LABOUR**
**LABOUR BUREAU**
**No: 112/1(KTK) / 2001 - FLS**

**'Cleremount Shimla-171004**
**Dated: 2ND DECEMBER 2005**

**CONSUMER PRICE INDEX NUMBERS FOR INDUSTRIAL WORKERS**
**(BASE-1982=100)**

**STATE : KARNATAKA** **MONTH: OCTOBER 2005**

| Code | Centre | BANGALORE | BELGAUM | HUBLI DHARWAD | MERCARA |
|---|---|---|---|---|---|
| 1 | 2 | 3 | 4 | 5 | 6 |
| 1000 | **IA : Food** | | | | |
| 1100 | (a) Cereals & Products | 434 | 536 | 448 | 443 |

| 1 | 2 | 3 | 4 | 5 | 6 |
|---|---|---|---|---|---|
| 1200 | (b) Pulses and Products | 584 | 543 | 569 | 603 |
| 1300 | (c) Oils & Fats | 404 | 362 | 382 | 428 |
| 1400 | (d) Meat, Fish & Eggs | 660 | 612 | 634 | 611 |
| 1500 | (e) Milk & Products | 379 | 530 | 442 | 461 |
| 1600 | (f) Condiments & Spices | 561 | 704 | 688 | 531 |
| 1700 | (g) Vegetables & Fruits | 610 | 534 | 634 | 560 |
| 1800 | (h) Other Food | 796 | 827 | 726 | 751 |
| 1000 | **FOOD GROUP** | 547 | 592 | 544 | 539 |
| 2000 | Pan, Supari, Tobacco & intoxicants | 660 | 597 | 585 | 535 |
| 3000 | Fuel and Light | 873 | 698 | 617 | 431 |
| 4000 | Housing Index | 630 | 797 | 651 | 200 |
| 5000 | Clothing, Bedding and Footweare | 291 | 285 | 331 | 437 |
| 6000 | **Miscellaneous** | | | | |
| 6100 | (a) Medical Care | 437 | 552 | 469 | 343 |
| 6200 | (b) Education, Recreation & Amusement | 503 | 851 | 623 | 641 |
| 6300 | (c) Transport and Communication | 810 | 520 | 772 | 699 |
| 6400 | (d) Personal Care & Effects | 487 | 484 | 508 | 471 |
| 6500 | (e) Others | 524 | 595 | 460 | 482 |
| 6600 | Miscellaneous Group | 551 | 582 | 537 | 515 |
| | **GENERAL INDEX** | **546** | **602** | **554** | **500** |

**R.S. NEGI**

P.R. 48 Deputy Director,

## ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಬೆಂಗಳೂರು ಇವರ ನಡವಳಿಗಳು

**ವಿಷಯ:** ಶ್ರೀಮತಿ ತಿಲಕಾವತಿ, ರೇಷ್ಮೆ ಪ್ರವರ್ತಕರು, ತಾಂತ್ರಿಕ ಸೇವಾ ಕೇಂದ್ರ, ವರ್ತೂರು ಇವರ ವಿರುದ್ಧ ಶಿಸ್ತು ಕ್ರಮ.

**ಉಲ್ಲೇಖ:**
1. ತಿಳುವಳಿಕೆ ಪತ್ರದ ಸಂ:ರೇಉನಿಬೆಂ:ಸಿಬ್ಬಂದಿ:ತಾಸೇಕೇ:03:2003-04 ದಿನಾಂಕ:30.10.2004.
2. ರೇಷ್ಮೆ ಉಪನಿರ್ದೇಶಕರು, ಜಿ.ಪಂ. (ನಗರ) ಬೆಂಗಳೂರು ಇವರ ಆದೇಶ ಸಂ:ರೇಉನಿಜಿ:ಸಿಬ್ಬಂದಿ:ತಾಸೇಕೇವ:3: 03-04 ದಿನಾಂಕ:27.12.2004.
3. ರೇಷ್ಮೆ ಸಹಾಯಕ ನಿರ್ದೇಶಕರು, ಬೆಂಗಳೂರು ದಕ್ಷಿಣ ತಾಲ್ಲೂಕು, ಬೆಂಗಳೂರು ದಕ್ಷಿಣ ತಾಲ್ಲೂಕು, ಬೆಂಗಳೂರು ಇವರ ಪತ್ರ ಸಂ:ರೇಸನಿ:ಬೆಂದ:ತಿಲಕಾವತಿ:ವಿಚಾರಣೆ:06:04-05 ದಿನಾಂಕ 8.8.2005
4. ರೇಷ್ಮೆ ಉಪನಿರ್ದೇಶಕರು, ಜಿ.ಪಂ. (ನಗರ) ಬೆಂಗಳೂರು ಇವರ ಪತ್ರದ ಸಂ:ರೇಉನಿವ:ಸಿಬ್ಬಂದಿ:ತಾಸೇಕೇವ:3: 04-05 ದಿನಾಂಕ 17.10.2005.

**ಪೀಠಿಕೆ:**

ತಾಂತ್ರಿಕ ಸೇವಾ ಕೇಂದ್ರ, ವರ್ತೂರು ಇಲ್ಲಿ ಅನುಕಂಪದ ಆಧಾರದ ಮೇಲೆ ನೇಮಕವಾಗಿ ರೇಷ್ಮೆ ಪ್ರವರ್ತಕರಾಗಿ ಕಾರ್ಯ ನಿರ್ವಹಿಸುತ್ತಿದ್ದ ಶ್ರೀಮತಿ ತಿಲಕಾವತಿ ಇವರು ಸರಕಾರಿ ಕೆಲಸಕ್ಕೆ ಪದೇ ಪದೇ ಅನಧಿಕೃತ ಗೈರು ಹಾಜರಿಯಾಗಿ ಕೆಲಸ ಕಾರ್ಯಗಳಿಗೆ ತೊಂದರೆಯನ್ನುಂಟು ಮಾಡುತ್ತಿರುವುದನ್ನು ಗಮನಿಸಿ ಇವರ ಮೇಲಾಧಿಕಾರಿಗಳಾದ ರೇಷ್ಮೆ ವಿಸ್ತರಣಾಧಿಕಾರಿ ತಾಂತ್ರಿಕ ಸೇವಾ ಕೇಂದ್ರ, ವರ್ತೂರು ಇವರು ಹಲವು ಬಾರಿ ಪತ್ರಗಳನ್ನು ಬರೆದು ಕೆಲಸಕ್ಕೆ ಹಾಜರಾಗುವಂತೆ ಸೂಚಿಸಿರುತ್ತಾರೆ. ಆದರೂ ಶ್ರೀಮತಿ ತಿಲಕಾವತಿ, ರೇಷ್ಮೆ ಪ್ರವರ್ತಕರು ಸದರಿ ನಿರ್ದೇಶನಗಳನ್ನು ಕಡೆಗಣಿಸಿ ಕೆಲಸಕ್ಕೆ ಗೈರು ಹಾಜರಿಯಾಗುವ ಪ್ರವೃತ್ತಿಯನ್ನು ಮುಂದುವರಿಸಿರುತ್ತಾರೆ. ಇದರಿಂದ ಇವರ ವಿರುದ್ಧ ಕೆ.ಸಿ.ಎಸ್. (ಸಿ.ಸಿ.ಎ) ನಿಯಮದಡಿಯಲ್ಲಿ ಶಿಸ್ತು ಕ್ರಮ ಜರುಗಿಸಲು ರೇಷ್ಮೆ ಉಪನಿರ್ದೇಶಕರು, ಜಿ.ಪಂ. (ನಗರ) ಬೆಂಗಳೂರು ಇವರು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 11 ರಡಿಯಲ್ಲಿ ಆರೋಪ ಪಟ್ಟಿಯನ್ನು ಉಲ್ಲೇಖ (1)ರಲ್ಲಿ ಜಾರಿ ಮಾಡಿರುತ್ತಾರೆ. ಇವರ ವಿರುದ್ಧ ಮಾಡಿರುವ ಆರೋಪಗಳು ಈ ಕೆಳಕಂಡಂತೆ ಇರುತ್ತದೆ.

### ಆರೋಪ

ಶ್ರೀಮತಿ ತಿಲಕಾವತಿ, ರೇಷ್ಮೆ ಪ್ರವರ್ತಕರು, ತಾಂತ್ರಿಕ ಸೇವಾ ಕೇಂದ್ರ, ವರ್ತೂರು ಆದ ನೀವು ಅನುಕಂಪದ ಆಧಾರದ ಮೇಲೆ ಉದ್ಯೋಗಾವಕಾಶವನ್ನು ಪಡೆದು ಆಯುಕ್ತರ ಆದೇಶದಂತೆ ದಿನಾಂಕ: 27.1.2003 ರಂದು ತಾಂತ್ರಿಕ ಸೇವಾ ಕೇಂದ್ರ, ವರ್ತೂರಿನಲ್ಲಿ ಕಾರ್ಯವರದಿ ಮಾಡಿಕೊಂಡಿರುತ್ತೀರಿ. ಆದರೆ ನೀವು ದಿನಾಂಕ: 27.01.2003 ರಿಂದ ಈವರೆಗೂ ಸಕ್ಷಮ ಪ್ರಾಧಿಕಾರಿಗಳಿಂದ ಪೂರ್ವಾನುಮತಿ ಪಡೆಯುವಲ್ಲಿ ರಜೆ

ಚೀಟಿ ಸಲ್ಲಿಸಿ ರಜೆ ಮಂಜೂರು ಮಾಡಿಸಿಕೊಳ್ಳದೇ ಪದೇ ಪದೇ ಅನಧಿಕೃತವಾಗಿ ಗೈರು ಹಾಜರಾಗಿ ಸರ್ಕಾರಿ ಕೆಲಸ ಕಾರ್ಯಗಳಿಗೆ ಅಡ್ಡಿಯನ್ನು ಉಂಟು ಮಾಡಿರುತ್ತೀರಿ. ಗೈರುಹಾಜರಿ ಸಂಬಂಧ ಸಕ್ಷಮ ಪ್ರಾಧಿಕಾರಿಗಳು ನೀಡಿದ ಹಲವಾರು ಜ್ಞಾಪನಗಳಿಗೆ ಪ್ರತ್ಯುತ್ತರ ನೀಡದೆ ಮೇಲಾಧಿಕಾರಿಗಳ ಆದೇಶವನ್ನು ಉಲ್ಲಂಘಿಸಿ ಕರ್ತವ್ಯಚ್ಯುತಿ ಉಂಟು ಮಾಡಿರುತ್ತೀರಿ. ಇದರಿಂದ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿಗಳು 1966ರ ನಿಯಮ 3(1) ರನ್ನು ಉಲ್ಲಂಘಿಸಿ ದುರ್ನಡತೆ ಎಸಗಿರುತ್ತೀರಿ.

ಮೇಲಿನ ಆರೋಪ ಪಟ್ಟಿಯನ್ನು ಶ್ರೀಮತಿ ತಿಲಕಾವತಿ, ರೇಷ್ಮೆ ಪ್ರವರ್ತಕರು ಇವರು ದಿನಾಂಕ 4.11.2004 ರಂದು ಸ್ವೀಕರಿಸಿರುತ್ತಾರೆ. ಆದರೆ ಆರೋಪ ಕುರಿತಂತೆ ಯಾವುದೇ ಲಿಖಿತ ಹೇಳಿಕೆಯನ್ನು ನೀಡಿರುವುದಿಲ್ಲ. ಇದರಿಂದ ಆರೋಪದ ಸತ್ಯಾಸತ್ಯತೆಯನ್ನು ಕಂಡುಹಿಡಿಯಲು ನಿರ್ಧರಿಸಿ ಉಲ್ಲೇಖ (2) ರಂತೆ ರೇಷ್ಮೆ ಉಪನಿರ್ದೇಶಕರು, ಜಿ.ಪಂ. (ನಗರ) ಬೆಂಗಳೂರು ಇವರು ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸಿ ಆದೇಶ ಹೊರಡಿಸಿರುತ್ತಾರೆ. ವಿಚಾರಣಾಧಿಕಾರಿಗಳು ಸಿ.ಸಿ.ಎ. ನಿಯಮ 11 ರಡಿಯ ವಿಧಿ ವಿಧಾನಗಳನ್ನು ಅನುಸರಿಸಿ ವಿಚಾರಣೆ ನಡೆಸಿರುತ್ತಾರೆ ಹಾಗೂ ವಿಚಾರಣಾ ವರದಿಯನ್ನು ಉಲ್ಲೇಖ (3)ರ ಪತ್ರದಲ್ಲಿ ಶಿಸ್ತು ಪ್ರಾಧಿಕಾರಕ್ಕೆ ಒಪ್ಪಿಸಿರುತ್ತಾರೆ. ಶಿಸ್ತು ಪ್ರಾಧಿಕಾರವು ವಿಚಾರಣಾ ವರದಿಯನ್ನು ಪರಿಶೀಲಿಸಿ ಶ್ರೀಮತಿ ತಿಲಕಾವತಿ, ರೇಷ್ಮೆ ಪ್ರವರ್ತಕರು ಇವರು ಕಛೇರಿ ಕೆಲಸಕ್ಕೆ ಅನಧಿಕೃತ ಗೈರು ಹಾಜರಿಯಾಗಿರುವ ಆರೋಪವು ಸಾಬೀತಾಗಿರುವುದರಿಂದ ವಿಚಾರಣಾ ವರದಿಯ ಪ್ರತಿಯನ್ನು ಆರೋಪಿತರಿಗೆ ಜಾರಿಗೊಳಿಸಿ, ಆರೋಪಿತರ ಲಿಖಿತ ಹೇಳಿಕೆಯನ್ನು ಸಲ್ಲಿಸಲು ಸೂಚಿಸಿರುತ್ತಾರೆ. ಆರೋಪಿತ ನೌಕರರು ವಿಚಾರಣಾ ವರದಿಯನ್ನು ಸ್ವೀಕರಿಸಿ ಸ್ವೀಕೃತಿ ನೀಡಿರುತ್ತಾರೆ. ಆದರೆ ಯಾವುದೇ ಲಿಖಿತ ಹೇಳಿಕೆ ನೀಡಿರುವುದಿಲ್ಲ. ಇದರಿಂದ ಉಲ್ಲೇಖ (4) ರಂತೆ ರೇಷ್ಮೆ ಉಪನಿರ್ದೇಶಕರು, ಜಿ.ಪಂ. (ನಗರ) ಬೆಂಗಳೂರು ಇವರು ಆಯುಕ್ತರಿಗೆ ಪ್ರಸ್ತಾವನೆಯನ್ನು ಒಪ್ಪಿಸಿ, ಕೆ.ಸಿ.ಎಸ್. (ಸಿ.ಸಿ.ಎ) ನಿಯಮಗಳ ಅಡಿಯಲ್ಲಿ ಕಠಿಣ ದಂಡನೆ ವಿಧಿಸಲು ಕೋರಿರುತ್ತಾರೆ.

ಶ್ರೀಮತಿ ತಿಲಕಾವತಿ, ರೇಷ್ಮೆ ಪ್ರವರ್ತಕರು, ತಾಂತ್ರಿಕ ಸೇವಾ ಕೇಂದ್ರ, ವರ್ತೂರು ಇವರ ಇಲಾಖಾ ವಿಚಾರಣೆಯ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. ಸದರಿಯವರು ಅನುಕಂಪದ ಆಧಾರದ ಮೇಲೆ ನೇಮಕಗೊಂಡು ತಾಂತ್ರಿಕ ಸೇವಾ ಕೇಂದ್ರ, ವರ್ತೂರು ಇಲ್ಲಿ ದಿನಾಂಕ: 27.1.2003 ರಂದು ಕಾರ್ಯವರದಿ ಮಾಡಿಕೊಂಡಿರುತ್ತಾರೆ. ತದನಂತರ ಏಪ್ರಿಲ್ 2003 ರಿಂದ ಕಛೇರಿ ಕೆಲಸಕ್ಕೆ ಪದೇ ಪದೇ ಗೈರು ಹಾಜರಿಯಾಗಲು ಆರಂಭಿಸಿರುತ್ತಾರೆ. ಇವರ ಗೈರು ಹಾಜರಿಯನ್ನು ಗಮನಿಸಿ ಇವರ ಮೇಲಾಧಿಕಾರಿಯವರು ಜ್ಞಾಪನ, ಕಾರಣ ಕೇಳಿ ತಿಳುವಳಿಕೆ ಪತ್ರವನ್ನು ರವಾನಿಸಿ ಕೆಲಸಕ್ಕೆ ಹಾಜರಾಗಲು ಸೂಚಿಸಿರುತ್ತಾರೆ. ಆದರೆ ಸದರಿಯವರು ಮೇಲಾಧಿಕಾರಿಗಳ ಆದೇಶವನ್ನು ಉಲ್ಲಂಘಿಸಿ ಗೈರು ಹಾಜರಿಯಲ್ಲಿಯೇ ಮುಂದುವರಿಯುತ್ತಿರುವುದು ದಾಖಲೆಗಳಿಂದ ದೃಢಪಡುತ್ತದೆ. ವಿಚಾರಣೆಯಲ್ಲಿಯೂ ಸಹಾ ಶ್ರೀಮತಿ ತಿಲಕಾವತಿ, ರೇಷ್ಮೆ ಪ್ರವರ್ತಕರು ಇವರು ತಮ್ಮ ಮೇಲಿನ ಆರೋಪವನ್ನು ಒಪ್ಪಿರುತ್ತಾರೆ ಹಾಗೂ ಕಛೇರಿ ಕೆಲಸಕ್ಕೆ ಹಾಜರಾಗದೆ ಗೈರು ಹಾಜರಿಯನ್ನು ಮುಂದುವರಿಸಿರುತ್ತಾರೆ. ಶ್ರೀಮತಿ ತಿಲಕಾವತಿ ಇವರು ದಿನಾಂಕ 27.1.2003 ರಿಂದಲೂ ಕಛೇರಿ ಕೆಲಸಕ್ಕೆ ದೀರ್ಘಾವಧಿಯ ಗೈರು ಹಾಜರಾಗಿ ಮೇಲಾಧಿಕಾರಿಗಳ ಆದೇಶವನ್ನು ಉಲ್ಲಂಘಿಸಿರುವುದು ಸಾಕ್ಷ್ಯಾಧಾರಗಳಿಂದ ದೃಢಪಡುತ್ತದೆ. ತಮ್ಮ ಕಾರ್ಯವೈಖರಿಯನ್ನು ತಿದ್ದಿಕೊಂಡು ಸರಕಾರಿ ಕೆಲಸವನ್ನು ನಿಷ್ಠೆಯಿಂದ ನಿರ್ವಹಿಸಲು ನೀಡಿರುವ ಅವಕಾಶವನ್ನು ಇವರು ಸದುಪಯೋಗಪಡಿಸಿಕೊಳ್ಳದೆ ಕಾರ್ಯ ನಿರ್ಲಕ್ಷತೆ ಎಸಗಿರುವುದನ್ನು ಗಮನಿಸಿದೆ. ಇದರಿಂದ ಇವರಿಗೆ ಸರಕಾರಿ ಕೆಲಸದಲ್ಲಿ ಮುಂದುವರೆಯಲು ಯಾವುದೇ ಆಸಕ್ತಿ ಇಲ್ಲದಿರುವುದು ವ್ಯಕ್ತವಾಗಿರುವುದರಿಂದ ಈ ಆದೇಶ.

**ಆದೇಶ ಸಂಖ್ಯೆ:ಸಿ3:ಶಿಸ್ತು:ಪ್ರವ-09:04-05, ಬೆಂಗಳೂರು, ದಿನಾಂಕ: 27ನೇ ಡಿಸೆಂಬರ್ 2005**

ಪೀಠಿಕೆಯಲ್ಲಿ ವಿವರಿಸಿರುವ ಅಂಶಗಳನ್ವಯ ಹಾಗೂ 1957 ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 9 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಅರವಿಂದ ಜನ್ನು, ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು:ಶಿಸ್ತು ಪ್ರಾಧಿಕಾರಿಯಾದ ನಾನು ಶ್ರೀಮತಿ ತಿಲಕಾವತಿ, ರೇಷ್ಮೆ ಪ್ರವರ್ತಕರು, ತಾಂತ್ರಿಕ ಸೇವಾ ಕೇಂದ್ರ, ವರ್ತೂರು ಇವರನ್ನು ಅದೇ ನಿಯಮಗಳ ನಿಯಮ 8(vii) ರಲ್ಲಿ ನಿರ್ದಿಷ್ಟಪಡಿಸಿರುವಂತೆ ಸರ್ಕಾರಿ ಸೇವೆಯಿಂದ ತೆಗೆದು ಹಾಕಿರುತ್ತೇನೆ.

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು,
ಹಾಗೂ ರೇಷ್ಮೆ ನಿರ್ದೇಶಕರು, ಶಿಸ್ತು ಪ್ರಾಧಿಕಾರಿಗಳು.

ಪಿ.ಆರ್. 49

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು

**ವಿಷಯ:** ಸಹಕಾರ ಸಂಘಗಳ ಸಮಾಪನಾಧಿಕಾರಿಗಳನ್ನು ಬದಲಾಯಿಸುವ ಬಗ್ಗೆ.

**ಉಲ್ಲೇಖ:**
1. ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಪ್ರಾಂತ, ಬೆಂಗಳೂರು ರವರ ಆದೇಶ ಸಂ:ಜೆಆರ್‌ಬಿ/ಸಮಾಪನೆ/36/98-99, ದಿನಾಂಕ: 30.11.1999.
2. ಸಹಕಾರ ಸಂಘಗಳ ಉಪನಿಬಂಧಕರು-2, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರುರವರ ಪ್ರಸ್ತಾವೆ ಸಂ: ಡಿಆರ್‌ಬಿ-2/ಸಮಾಪನೆ/57/2005-06, ದಿ.05.11.2005.

**ಪ್ರಸ್ತಾವನೆ:**

ಉಲ್ಲೇಖ (1)ರ ಆದೇಶದಲ್ಲಿ ಈ ಕೆಳಕಂಡ ಸಹಕಾರ ಸಂಘಗಳು ಸರಿಯಾಗಿ ಕೆಲಸ ನಿರ್ವಹಿಸದೆ ಬಹಳ ವರ್ಷಗಳಿಂದ ಸ್ಥಗಿತಗೊಂಡಿರುವ ಕಾರಣ ಈ ಸಂಘಗಳನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(2) ಬಿ ರನ್ವಯ ಸಮಾಪನೆಗೊಳಿಸಿ, ಕಲಂ 73 ರನ್ವಯ ನಗರ ನಿರೀಕ್ಷಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, 2ನೇ ವಲಯ, ಬೆಂಗಳೂರುರವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಲಾಗಿತ್ತು. ಸದರಿಯವರ ಹುದ್ದೆಯನ್ನು, ಅಧೀಕ್ಷಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, 2ನೇ ವಲಯ, ಬೆಂಗಳೂರುರವರಿಗೆ ಹೆಚ್ಚುವರಿಯಾಗಿ ಪ್ರಭಾರ ವ್ಯವಸ್ಥೆಗೊಳಿಸಲಾಗಿದ್ದು, ಇದರ ಜೊತೆಗೆ ವಿವಿಧ ರೀತಿಯ ಸಹಕಾರ ಸಂಘಗಳಿಗೆ ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿದ್ದು, ಸದರಿಯವರು ಕಛೇರಿಯ ದಿನನಿತ್ಯ ಕೆಲಸ-ಕಾರ್ಯಗಳನ್ನು ಹಾಗೂ ಕಛೇರಿ ಆಡಳಿತ ಉಸ್ತುವಾರಿಯನ್ನು ನಿರ್ವಹಿಸಬೇಕಾಗಿದ್ದು, ಸದರಿಯವರಿಗೆ ಈ ಎರಡೂ ಕೆಲಸಗಳನ್ನು ನಿಗದಿಪಡಿಸಿದಲ್ಲಿ, ಸದರಿಯವರು ಯಾವುದೇ ಕೆಲಸವನ್ನು ಸಮರ್ಪಕವಾಗಿ ಮಾಡಲು ಸಾಧ್ಯವಾಗುವುದಿಲ್ಲವೆಂದು ತಿಳಿಸುತ್ತಾ, ಸದರಿಯವರ ಬದಲಿಗೆ ಈ ಕೆಳಕಂಡ ಸಹಕಾರ ಸಂಘಗಳಿಗೆ ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ದಕ್ಷಿಣ

ತಾಲ್ಲೂಕು, ಇವರನ್ನು ಸಮಾಪನಾಧಿಕಾರಿಯಾಗಿ ನೇಮಿಸಬೇಕೆಂದು ಸಹಕಾರ ಸಂಘಗಳ ಸಹಾಯಕ ನಿಬಂಧಕರು, 2ನೇ ವಲಯ, ಬೆಂಗಳೂರು ರವರು ಶಿಫಾರಸ್ಸು ಮಾಡಿರುತ್ತಾರೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, 2ನೇ ವಲಯ, ಬೆಂಗಳೂರುರವರ ಶಿಫಾರಸ್ಸಿನಂತೆ ಸಹಕಾರ ಸಂಘಗಳ ಉಪನಿಬಂಧಕರು-2, ಬೆಂಗಳೂರು ರವರು ಈ ಸಂಘಗಳಿಗೆ ಸಮಾಪನಾಧಿಕಾರಿಯನ್ನು ಆಡಳಿತಾತ್ಮಕ ಕಾರಣಗಳಿಗೋಸ್ಕರ ಬದಲಾಯಿಸುವುದು ಸೂಕ್ತವೆಂದು ಅಭಿಪ್ರಾಯಪಟ್ಟು ಉಲ್ಲೇಖ (2) ರಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, 2ನೇ ವಲಯ, ಬೆಂಗಳೂರು ಹಾಗೂ ಸಹಕಾರ ಸಂಘಗಳ ಉಪ ನಿಬಂಧಕರು-2, ಬೆಂಗಳೂರು ರವರ ಶಿಫಾರಸ್ಸಿನನ್ವಯ ಆಡಳಿತಾತ್ಮಕ ಕಾರಣಗಳಿಗೋಸ್ಕರ ಈ ಸಂಘಗಳ ಸಮಾಪನಾಧಿಕಾರಿ ಯಾಗಿರುವ ನಗರ ನಿರೀಕ್ಷಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, 2ನೇ ವಲಯ, ಬೆಂಗಳೂರುರವರ ಬದಲಿಗೆ ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ದಕ್ಷಿಣ ತಾಲ್ಲೂಕುರವರನ್ನು ಸಮಾಪನಾಧಿಕಾರಿಯಾಗಿ ಬದಲಾವಣೆ ಮಾಡುವುದು ಸೂಕ್ತವೆಂದು ಪರಿಗಣಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

## ಆದೇಶ

## ಸಂಖ್ಯೆ:ಜೆಆರ್‌ಬಿ:ಎಲ್‌ಕ್ಯೂಡಿ:36:ಎಲ್‌ಎಂಸಿ:1998-99, ದಿನಾಂಕ: 26ನೇ ಡಿಸೆಂಬರ್ 2005

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(2) ಬಿ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ/69/ಸಿಎಲ್‌ಎಂ/2001, ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಕೆ.ಹೆಚ್. ತಿಮ್ಮಯ್ಯ, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ಈ ಕೆಳಕಂಡ ಸಹಕಾರ ಸಂಘಗಳ ಸಮಾಪನಾಧಿಕಾರಿಯಾಗಿದ್ದ ನಗರ ನಿರೀಕ್ಷಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, 2ನೇ ವಲಯ, ಬೆಂಗಳೂರು ರವರ ಬದಲಿಗೆ ಸಹಕಾರ ಅಭಿವೃದ್ಧಿ ಅಧಿಕಾರಿ, ದಕ್ಷಿಣ ತಾಲ್ಲೂಕುರವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿರುತ್ತೇನೆ.

| ಕ್ರ. ಸಂ. | ಸಂಘದ ಹೆಸರು | ಸಮಾಪನಾಧಿಕಾರಿಯಾಗಿ ನೇಮಕ |
|---|---|---|
| 1. | ಸ್ಟೇಟ್ ಅಕೌಂಟ್ಸ್ ಹೆಚ್.ಬಿ.ಸಿ.ಎಸ್. ಬೆಂಗಳೂರು | ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ದಕ್ಷಿಣ ತಾಲ್ಲೂಕು |
| 2. | ಕರ್ನಾಟಕ ಗೌರ್ನಮೆಂಟ್ ಡಿಪಾರ್ಟ್‌ಮೆಂಟ್ ಎಂಪ್ಲಾಯೀಸ್ ಹೆಚ್.ಬಿ.ಸಿ.ಎಸ್. ಕೇರ್ ಆಫ್ ಐ.ಟಿ.ಐ. ಬನ್ನೇರುಘಟ್ಟ ರಸ್ತೆ, ಬೆಂಗಳೂರು. | ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ದಕ್ಷಿಣ ತಾಲ್ಲೂಕು. |
| 3. | ಮೈಸೂರು ಗೌರ್ನಮೆಂಟ್ ಎಲೆಕ್ಟ್ರಿಕಲ್ ಡಿಪಾರ್ಟ್‌ಮೆಂಟ್ ಸಹಕಾರ ಸಂಘ (ನಿ) ಬೆಂಗಳೂರು. | ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ದಕ್ಷಿಣ ತಾಲ್ಲೂಕು |

ಸಮಾಪನಾಧಿಕಾರಿಯಾಗಿ ನೇಮಕಗೊಂಡು ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ದಕ್ಷಿಣ ತಾಲ್ಲೂಕುರವರು ಮೇಲ್ಕಂಡ ಸಹಕಾರ ಸಂಘಗಳ ಪ್ರಭಾರವನ್ನು ಹಿಂದಿನ ಸಮಾಪನಾಧಿಕಾರಿಯವರಿಂದ ಪಡೆದು, ಸಂಘದ ಲೆಕ್ಕ ಪುಸ್ತಕಗಳು, ದಾಖಲಾತಿಗಳು ಹಾಗೂ ಸಂಘದ ಆಸ್ತಿ-ಜವಾಬ್ದಾರಿಯನ್ನು ಜರೂರು ವಿಲೇವಾರಿ ಮಾಡಿ ಮೇಲ್ಕಂಡ ಸಂಘಗಳ ನೋಂದಣಿ ರದ್ದತಿ ಪ್ರಸ್ತಾವನೆ ಸಲ್ಲಿಸುವಂತೆ ಆದೇಶಿಸಿದೆ. ಈ ಆದೇಶವು ಕೂಡಲೇ ಜಾರಿಗೆ ಬರುವುದು.

ಈ ಆದೇಶವನ್ನು ನನ್ನ ಹಸ್ತಾಕ್ಷರ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ದಿನಾಂಕ: 26.12.2005 ರಂದು ಹೊರಡಿಸಿದೆ.

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

ಪಿ.ಆರ್. 50

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪವಿಭಾಗ-2, ಚಿಕ್ಕಮಗಳೂರು.

## ಪ್ರಕರಣ ಸಂಖ್ಯೆ: ಕಾಪಕಾ:ಎಫ್:17 : 2005

**ಅರ್ಜಿದಾರರು:**
ಶ್ರೀಮತಿ ಮಲಾರ್ ಕೋಂ ಲೇಟ್ ಚಂದ್ರ ಬೆಳಗೊಳ, ಇಂದಿರಾನಗರ, ಎಸಗಲಿ ಅಂಚೆ, ಮೂಡಿಗೆರೆ ತಾಲ್ಲೂಕು ಚಿಕ್ಕಮಗಳೂರು ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು:**
ಎಂ.ಟಿ. ಬಾಲರಾಜ್ ಬಿನ್ ಎಂ.ಎಸ್. ತಿಮ್ಮೇಗೌಡ ತಡಿಯಾಳ, ಮಾಕೋನಹಳ್ಳಿ ಅಂಚೆ ಮೂಡಿಗೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ.

## ಪ್ರಕಟಣೆ

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಯಪಡಿಸುವುದೇನೆಂದರೆ ಅರ್ಜಿದಾರರ ಗಂಡ ಮೃತ ಚಂದ್ರ ರವರು ಪ್ರತಿವಾದಿಯವರ ಎಸ್ಟೇಟ್‌ನಲ್ಲಿ ಕೂಲಿ ಕಾರ್ಮಿಕನಾಗಿ ಕೆಲಸ ಮಾಡುತ್ತಿದ್ದಾಗ ದಿನಾಂಕ 26.8.2004 ರಂದು ಅಪಘಾತವಾಗಿ ಮೃತಪಟ್ಟಿರುತ್ತಾರೆಂದು, ಈ ಸಂಬಂಧವಾಗಿ ಮೃತನ ಅವಲಂಬಿತರು ಎಂದು ಈ ಮೇಲ್ಕಂಡ ಅರ್ಜಿದಾರರು ಪರಿಹಾರಕ್ಕಾಗಿ ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ಸಂಬಂಧ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತನ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ ಅಂತಹವರು ಈ ಪ್ರಕಟಣೆಯು ರಾಜ್ಯ ಪತ್ರಿಕೆಯಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು, ತಪ್ಪಿದಲ್ಲಿ ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಆರ್.ಬಿ. ಬಾಗೇವಾಡಿ**
ಕಾರ್ಮಿಕ ಪರಿಹಾರ ಆಯುಕ್ತರು, ಉಪವಿಭಾಗ-2, ಚಿಕ್ಕಮಗಳೂರು.

ಪಿ.ಆರ್. 51

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪವಿಭಾಗ-4,**
**ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಐಟಿಐ ಆವರಣ, ಬೆಂಗಳೂರು-29**
**ಪ್ರಕರಣ ಸಂಖ್ಯೆ: ಡಬ್ಲ್ಯುಸಿಎ:ಎಫ್‌ಸಿ:ಸಿಆರ್-102/05 ದಿನಾಂಕ: 30ನೇ ಡಿಸೆಂಬರ್ 2005**

**ಅರ್ಜಿದಾರರು:**
ಶ್ರೀ ಶಂಭಯ್ಯ & ಇತರೆ 5 ಜನ
ವಿಳಾಸ ಕೊತ್ತನೂರು ಕಸಬಾ ಹೋಬಳಿ, ಕನಕಪುರ ತಾ।।
ಬೆಂಗಳೂರು ರೂರಲ್ ಡಿ.

**ವಿರುದ್ಧ**

**ಪ್ರತಿವಾದಿಗಳು:**
1. ವಿ. ಮಾಸ್ತಿಗೌಡ ಬಿನ್ ವರದೇಗೌಡ, ವಿರೂಪಸಂದ್ರ, ವಿಲೇಜ್ ಸಿಂಗಾರಾಜಿಪುರ ಪೋಸ್ಟ್, ಚನ್ನಪಟ್ಟಣ ತಾ।। ಬೆಂ. ರೂ. ಡಿಸ್ಟ್ರಿಕ್ಟ್.
2. ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿ., ನಂ. 2240/4, 1ನೇ ಮಹಡಿ, ಗಿರಿಯಮ್ಮ ಶಂಭುಗೌಡ, ಕಾಂಪ್ಲೆಕ್ಸ್, ಚರ್ಚ್‌ರಸ್ತೆ, ಚನ್ನಪಟ್ಟಣ.

**ಪ್ರಕಟಣೆ**

ಅರ್ಜಿದಾರರಾದ ಶ್ರೀ ಶಂಭಯ್ಯ & ಇತರೆ 5 ಜನ ಇವರುಗಳು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ದಿವಂಗತ ಜಯಸಿದ್ದೇಗೌಡ ಇವರು ಪ್ರತಿವಾದಿ 1 ಇವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಅಪಘಾತ ಹೊಂದಿ ಮೃತಪಟ್ಟಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೆ ತಾವು ಮೃತರ ಅವಲಂಬಿತರಾದ್ದರಿಂದ ತಮಗೆ ಕಾಯ್ದೆಯನ್ವಯ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

**ರಾಮಯ್ಯ**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉಪವಿಭಾಗ-4, ಬೆಂಗಳೂರು.

ಪಿ.ಆರ್. 52

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪವಿಭಾಗ-4,**
**ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಐಟಿಐ ಆವರಣ, ಬೆಂಗಳೂರು-29**
**ಪ್ರಕರಣ ಸಂಖ್ಯೆ: ಡಬ್ಲ್ಯುಸಿಎ:ಎಫ್‌ಸಿ:ಸಿಆರ್-105/2005 ದಿನಾಂಕ: 30ನೇ ಡಿಸೆಂಬರ್ 2005**

**ಅರ್ಜಿದಾರರು:**
ಶ್ರೀಮತಿ ದುಂಡಮ್ಮ W/o ಲೇಟ್ ದೊಳ್ಳಯ್ಯ
ಮೇದಮಾರನಹಳ್ಳಿ & ಪೋಸ್ಟ್ ಹಾರೋಹಳ್ಳಿ ಹೋಬಳಿ,
ಕನಕಪುರ ತಾ।। ಬೆಂ.ರೂ.ಡಿ.

**ವಿರುದ್ಧ**

**ಪ್ರತಿವಾದಿಗಳು:**
1. ವೆಂಕಟೇಶ ಶೆಟ್ಟಿ ಬಿನ್ ರಾಮಶೆಟ್ಟಿ ಉಯ್ಯಂಬಳ್ಳಿ & ಪೋಸ್ಟ್ ಕನಕಪುರ ತಾ।।
2. ಕೆ.ಯು. ಹೊನ್ನಪ್ಪ ಬಿನ್ ವೀರತಪ್ಪ, KSL ಲೇಔಟ್, ಗುಂಡ್ಲುಪೇಟೆ, ಚಾಮರಾಜನಗರ ಡಿ.
3. ದಿ ನ್ಯೂ ಇಂ ಅಶೂರೆನ್ಸ್ ಕಂ. ಲಿ., R/o ಯೂನಿಟಿ ಬಿಲ್ಡಿಂಗ್ ಅನೆಕ್ಸ್ ಮಿಷನ್‌ರಸ್ತೆ, ಬೆಂ. 27

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ದುಂಡಮ್ಮ ಇವರುಗಳು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ದಿವಂಗತ ವೆಂಕಟೇಶ್ @ ವೆಂಕಟಚಲ ಇವರು ಪ್ರತಿವಾದಿ 1 ಇವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಅಪಘಾತ ಹೊಂದಿ ಮೃತಪಟ್ಟಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೆ ತಾವು ಮೃತರ ಅವಲಂಬಿತರಾದ್ದರಿಂದ ತಮಗೆ ಕಾಯ್ದೆಯನ್ವಯ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

**ರಾಮಯ್ಯ**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉಪವಿಭಾಗ-4, ಬೆಂಗಳೂರು.

ಪಿ.ಆರ್. 53

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು ಇ.ಐ.ಬಿ., ಕೊಡಗು ಜಿಲ್ಲೆ, ಮಡಿಕೇರಿ ರವರ ಕಛೇರಿ ನಡವಳಿಗಳು**

**ಉಪಸ್ಥಿತರು:** ಎನ್.ಎಂ. ಹುಸೇನ್,
ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು ವಿಚಕ್ಷಣದಳ (ಇಐಬಿ),
ಕೊಡಗು ಜಿಲ್ಲೆ, ಮಡಿಕೇರಿ.

| ಫಿರ್ಯಾದುದಾರರು | ವಿರುದ್ಧ | ಆರೋಪಿಗಳು |
|---|---|---|
| ಆರಕ್ಷಕ ಉಪ ನಿರೀಕ್ಷಕರು,<br>ವಿರಾಜಪೇಟೆ ಗ್ರಾಮಾಂತರ ಠಾಣೆ. | | 1. ಚೆಮೀರ ಪ್ರಕಾಶ, (ಪೂವಯ್ಯ)<br>ತಂದೆ ಪೌತಿ ಮಂದಪ್ಪ, ವಿ.ಬಾಡಗ ವಿರಾಜಪೇಟೆ ತಾಲ್ಲೂಕು<br>2. ಚೊಟ್ಟಾರಂಡ ತಮ್ಮಯ್ಯ (ರೇಣು)<br>ತಂದೆ ಸೋಮಯ್ಯ, ನಾಂಗಾಲಾ ಗ್ರಾಮ, ವಿರಾಜಪೇಟೆ.<br>3. ಚಂಬಂಡ ಸಂತೋಷ್ |

**ಪ್ರಕರಣದ ಮುಖ್ಯಾಂಶಗಳು:**

ದಿ: 7.6.2005 ರಂದು ಆರಕ್ಷಕರು ಉಪ ನಿರೀಕ್ಷಕರು, ವಿರಾಜಪೇಟೆ ಗ್ರಾಮಾಂತರ ಠಾಣೆ ಇವರು ಕರ್ತವ್ಯದಲ್ಲಿದ್ದಾಗ ದೊರೆತ ಖಚಿತ ವರ್ತಮಾನದ ಮೇರೆಗೆ ವಿ.ಬಾಡಗ ವಾಸಿ ಮಂದಪ್ಪನವರ ಮನೆಯ ಬಳಿ ಚೇಮೀರ ಪ್ರಕಾಶ ಮತ್ತು ನಾಂಗಾಲ ಗ್ರಾಮದ ವಾಸಿ ಚೊಟ್ಟಾರಂಡ ತಮ್ಮಯ್ಯ ಇವರುಗಳು ನಕಲಿ ಸಾರಾಯಿ ಪ್ಯಾಕೇಟುಗಳನ್ನು ತಯಾರಿಸುತ್ತಿದ್ದಾರೆಂಬ ವರ್ತಮಾನದ ಮೇರೆಗೆ ಪಂಚರೊಂದಿಗೆ ದಾಳಿ ನಡೆಸಿ ನಕಲಿ ಸಾರಾಯಿ ಪ್ಯಾಕೇಟುಗಳನ್ನು ತಯಾರಿಸುವ ಯಂತ್ರೋಪಕರಣಗಳನ್ನು ಇದಕ್ಕೆ ಸಂಬಂಧಪಟ್ಟ ವಸ್ತುಗಳನ್ನು ವಶಪಡಿಸಿಕೊಂಡ ಸಂದರ್ಭದಲ್ಲಿ ಆರೋಪಿಗಳಾದ ತಮ್ಮಯ್ಯ ಮತ್ತು ಪ್ರಕಾಶರವರು ನೀಡಿದ ಸ್ವಇಚ್ಛೆ ಹೇಳಿಕೆ ಆಧಾರದ ಮೇಲೆ ಆರಕ್ಷಕ ಉಪ ನಿರೀಕ್ಷಕರು, ವಿರಾಜಪೇಟೆ ಗ್ರಾಮಾಂತರ ಠಾಣೆ ಇವರು ಆರೋಪಿಗಳೊಂದಿಗೆ ತಮ್ಮಯ್ಯನವರ ಮನೆಯ ಎಡಭಾಗದ ಬದಿಯಲ್ಲಿ ನಿಲ್ಲಿಸಿದ್ದ ಕಾರನ್ನು ತೋರಿಸಿ ಈ ಕಾರಿನ ಒಳಗಡೆ ನಾವು ತಯಾರಿಸಿದ ನಕಲಿ ಸಾರಾಯಿ ಪ್ಯಾಕೇಟುಗಳು ಮಾರಾಟ ಮಾಡಿ ಉಳಿದ ಪ್ಯಾಕೇಟುಗಳು ಹಾಗೂ ಸ್ಪಿರಿಟ್ ತುಂಬಿರುವ ಒಂದು 35 ಲೀಟರಿನ ಪ್ಲಾಸ್ಟಿಕ್ ಕ್ಯಾನ್ ಇರುತ್ತದೆ ಎಂದು ತಿಳಿಸಿದ್ದು, ಸದರಿ ಕಾರಿನ ಹಿಂಭಾಗದ ಬಾಗಿಲನ್ನು ತೆರೆದು ಪಂಚರ ಸಮಕ್ಷಮ ಪರಿಶೀಲಿಸಿದಾಗ ಒಂದು ಬಿಳಿ ಬಣ್ಣದ ಪ್ಲಾಸ್ಟಿಕ್ ಗೋಣಿಚೀಲದಲ್ಲಿ ಸಾರಾಯಿ ಪ್ಯಾಕೇಟುಗಳಿರುವುದು ಕಂಡು ಬಂತು. ಪರಿಶೀಲಿಸಲಾಗಿ 85 X 100 ಎಂ.ಎಲ್. ನ ಸಾರಾಯಿ ಪ್ಯಾಕೇಟುಗಳಿದ್ದು ಅದರ ಮೇಲ್ಭಾಗದಲ್ಲಿ 100 ಎಂ.ಎಲ್. 35 ಯು.ಪಿ. ಜೆ.ಪಿ.ಡಿಸ್ಟಿಲ್ಲರೀಸ್ ಪ್ರೈ. ಲಿ. ಎಂಬ ಪ್ರಿಂಟ್ ಇರುತ್ತದೆ. ಹಾಗೂ ಒಂದು ಬಿಳಿಯ ಪ್ಲಾಸ್ಟಿಕ್ ಕ್ಯಾನ್ ಇದ್ದು ಅದರ ಮುಚ್ಚಳವನ್ನು ತೆರೆದು ನೋಡಲಾಗಿ ಘಾಟು ವಾಸನೆ ಬಂದಿದ್ದು, ಪಂಚರು ಇದನ್ನು ಗುರುತಿಸಿ ಸ್ಪಿರಿಟ್ ಎಂಬ ಅಭಿಪ್ರಾಯ ಪಟ್ಟಿರುತ್ತಾರೆ. ಅಕ್ರಮ ವ್ಯವಹಾರದಲ್ಲಿ ತೊಡಗಿದ ಕಾರನ್ನು ಅಜಮಾಯಿಸಿ ನೋಡಲಾಗಿ ಒಂದು ಮಾರುತಿ 800 ಸುಜುಕಿ ಬಿಳಿ ಬಣ್ಣದ ಕಾರಾಗಿದ್ದು, ಇದರ ನೋಂದಣಿ ಸಂ: ಎಂ.ಹೆಚ್.-01-ಎ-3013 ಎಂದು ಬರೆದಿದ್ದು, ಹಿಂಭಾಗ ಮತ್ತು ಮುಂಭಾಗದಲ್ಲಿ ನಂಬರ್ ಪ್ಲೇಟ್ ಇರುತ್ತದೆ. ಸದರಿ ಮಾರುತಿ 800 ಕಾರ್ ಮತ್ತು ಈ ಕೆಳಕಂಡ ವಸ್ತುಗಳನ್ನು ವಶಪಡಿಸಿಕೊಳ್ಳಲಾಗಿರುತ್ತದೆ.

1. 35 ಲೀಟರಿನ ಸ್ಪಿರಿಟ್ ತುಂಬಿದ್ದ ಒಂದು ಕ್ಯಾನ್
2. 85 ನಕಲಿ ಸಾರಾಯಿ ಪ್ಯಾಕೇಟು
3. ಸಿಮೆಂಟ್ ಬಣ್ಣದ ನಕಲಿ ಸಾರಾಯಿ ತಯಾರಿಸುವ ಯಂತ್ರ
4. 1 ಹೆಚ್.ಪಿ. ತಿಳಿಹಸಿರು ಬಣ್ಣದ ಮೋಟಾರ್
5. ಬಿಳಿ ಬಣ್ಣದ ಫೈಬರ್ ಓವರ್ ಟ್ಯಾಂಕ್
6. ನಕಲಿ ಸಾರಾಯಿ ಪ್ಯಾಕೇಟ್ ತಯಾರಿಸುವ ಪ್ಲಾಸ್ಟಿಕ್ ರೋಲ್
7. ಒಂದು ಗೋಣಿ ಚೀಲದಲ್ಲಿ ಹರಿದು ಹೋದ ಪ್ಲಾಸ್ಟಿಕ್ ಖಾಲಿ ಸಾರಾಯಿ ಪ್ಯಾಕೇಟುಗಳು
8. ಅರ್ಧ ಹೆಚ್.ಪಿ. ಕಿರ್ಲೋಸ್ಕರ್ ಮೋಟಾರ್
9. ಬಿಳಿ ಬಣ್ಣದ ಫೈಬರ್ ಅಳತೆ ಮಾಪನ
10. ಮೂರು ಬಿಳಿ ಬಣ್ಣದ ಕ್ಯಾನ್‌ಗಳು

ಮೇಲ್ಕಾಣಿಸಿದ ವಸ್ತುಗಳನ್ನು ವಶಕ್ಕೆ ತೆಗೆದುಕೊಂಡು ಮೇಲೆ ಕಾಣಿಸಿದ ಆರೋಪಿಗಳ ವಿರುದ್ಧ ಅಕ್ರಮ ತಯಾರಿಕೆ ಮತ್ತು ಸಾಗಾಣಿಕೆ ಎಂದು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 32, 34, 43, 11, 13ರ ಪ್ರಕಾರ ಮೊಕದ್ದಮೆ ಸಂ: 81/2005, ದಿ:7.6.05 ರಂತೆ ಮೊಕದ್ದಮೆಯನ್ನು ದಾಖಲು ಮಾಡಿಕೊಂಡು ಮುಂದಿನ ಕ್ರಮದ ಬಗ್ಗೆ ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ವಿರಾಜಪೇಟೆ ಇವರಿಗೆ ಹಸ್ತಾಂತರಿಸಿರುತ್ತಾರೆ.

ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ವಿರಾಜಪೇಟೆ ಇವರು ಮೊದಲ ಹಂತದ ತನಿಖೆಯನ್ನು ಪ್ರಾರಂಭಿಸಿ ವಶಪಡಿಸಿಕೊಂಡ 85 X 100 ಎಂ.ಎಲ್.ನ ಸಾರಾಯಿ ಪ್ಯಾಕೇಟುಗಳಿಂದ 2 X 100 ಎಂ.ಎಲ್.ನ ಸಾರಾಯಿ ಪ್ಯಾಕೇಟು ಮತ್ತು 35 ಲೀಟರಿನ ಸ್ಪಿರಿಟಿನಿಂದ 180 ಎಂ.ಎಲ್. ಗಳನ್ನು ಮಾದರಿ ತೆಗೆದು ದಿ:3.8.2005 ರಂದು ರಾಸಾಯನಿಕ ತಜ್ಞರು, ಮಂಗಳೂರು ರಾಸಾಯನಿಕ ಕೇಂದ್ರ ಇವರಿಗೆ ಕಳಿಸಿದ್ದು ಅವರ ವರದಿ ಸಂ: ಇ292/3, ದಿ:23.8.2005 ರಲ್ಲಿ ಸದರಿ ಸಾರಾಯಿಯ ಆಲ್ಕೋಹಾಲ್ ಪ್ರಮಾಣ 33.0% ಮತ್ತು 27.0% ವಿ.ವಿ. ಮತ್ತು ಮದ್ಯಸಾರದ ಪ್ರಮಾಣ 74.0% ವಿವಿ 60 ಡಿಗ್ರಿ ಎಫ್ ಇರುವುದಾಗಿ ಹಾಗೂ ಸದರಿ ಮಾದರಿಗಳು ಮದ್ಯ ಅಥವಾ ಸಾರಾಯಿ ತಯಾರಿಸಲು ಉತ್ತಮ ಮಟ್ಟ ಹೊಂದಿಲ್ಲವಾಗಿ ದೃಢೀಕರಣ ನೀಡಿರುತ್ತಾರೆ.

ಹಾಗೂ ವಶಪಡಿಸಿಕೊಂಡ ಮಾರುತಿ-800 ಕಾರ್ ಸಂ: ಎಂ.ಹೆಚ್.-01-ಎ-3013 ರ ಅಧಿಕೃತ ಮಾಲೀಕರನ್ನು ಪತ್ತೆ ಹಚ್ಚಲು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿ ರವರಿಗೆ ಪತ್ರ ಬರೆದಿದ್ದು ಅವರ ವರದಿ ದಿ:24.11.05 ರಂದು ಪತ್ರವನ್ನು ನೀಡಿ ಸದರಿ ವಾಹನವು ವಾಹನದ ಮಾಲೀಕತ್ವ ವರ್ಗಾವಣೆಯಿಂದಾಗಲೀ ಅಥವಾ ವಿಳಾಸ ಬದಲಾವಣೆಯಿಂದಾಗಲೀ ಈ ವಲಯಕ್ಕೆ ಸೇರ್ಪಡೆಗೊಂಡಿಲ್ಲವಾದ ಕಾರಣ ಬಿ ವಹಿಯನ್ನು ನೀಡಲು ಸಾಧ್ಯವಿಲ್ಲವೆಂದು ವರದಿ ನೀಡಿರುತ್ತಾರೆ.

ಸದರಿ ಬಿ ವಹಿ ದೊರೆಯದೆ ಇರುವುದರಿಂದ 1965 ರ ಕಲಂ 43 ಬಿ ರ ಪ್ರಕಾರ ಕ್ರಮ ಜರುಗಿಸಲು ಸಾಧ್ಯವಾಗಿರುವುದಿಲ್ಲ. ಸದರಿ ಮೊಕದ್ದಮೆಯಲ್ಲಿ ವಾಹನ ಮತ್ತು ಸೊತ್ತುಗಳನ್ನು ವಶಪಡಿಸಿಕೊಂಡು ಸುಮಾರು ಆರು ತಿಂಗಳು ಕಳೆಯುತ್ತಾ ಬಂದರೂ ಸಹಾ ವಾಹನಕ್ಕೆ ಸಂಬಂಧಪಟ್ಟ ಅಧಿಕೃತ ಮಾಲೀಕರಾಗಲೀ ಅವರ ಪರ ವಕೀಲರಾಗಲೀ ವಶಪಡಿಸಿಕೊಂಡ ಸೊತ್ತುಗಳು ತಮ್ಮದೆಂದು ಕೋರಿ ಸೂಕ್ತ ಸಾಕ್ಷ್ಯಾಧಾರಗಳೊಂದಿಗೆ ಈ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸಿರುವುದಿಲ್ಲ. ಹಾಗೂ ರಾಸಾಯನಿಕ ದೃಢೀಕರಣದ ಪ್ರಕಾರ ವಶಪಡಿಸಿಕೊಂಡ ವಸ್ತುಗಳು ಸಾರಾಯಿ ಮತ್ತು ಮದ್ಯಸಾರವೆಂದು ದೃಢಪಟ್ಟಿದ್ದು ವಾಹನದ ಮಾಲೀಕರು ಅಬಕಾರಿ ಕಾನೂನಿನ ಅರಿವಿದ್ದೇ ಸರಕಾರಕ್ಕೆ ವಂಚನೆ ಮಾಡುವ ಕೃತ್ಯದಲ್ಲಿ ಭಾಗಿಯಾಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ.

ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43 ರಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಲ್ಲಿ ಆರೋಪಿಗಳು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಗಳು ಇಲ್ಲದಿದ್ದಲ್ಲಿ ಹಾಗೂ ಜಪ್ತಿ ಮಾಡಲಾದ ವಾಹನವನ್ನು ಜಪ್ತಿಪಡಿಸಿದ ಒಂದು ತಿಂಗಳೊಳಗೆ ಯಾವುದೇ ವ್ಯಕ್ತಿಯು ವಾಹನಕ್ಕೆ ಸಂಬಂಧಿಸಿದ ಕಾನೂನುಬದ್ಧವಾದ ದಾಖಲಾತಿಗಳೊಂದಿಗೆ ಮಾಲೀಕತ್ವವನ್ನು ಕೋರಿ ಪ್ರಾಧಿಕಾರದ ಮುಂದೆ ಬಾರದಿದ್ದಲ್ಲಿ ಮತ್ತು ಸದರಿ ಸ್ವತ್ತುಗಳು ಕರ್ನಾಟಕ ಅಬಕಾರಿ ಕಾಯಿದೆ 1965 ಕಲಂ 43ಸಿ ರಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದಂತಹ ಸ್ವತ್ತುಗಳಾಗಿದ್ದಲ್ಲಿ ಈ ಪ್ರಾಧಿಕಾರವು ಅಕ್ರಮ ಮದ್ಯ ಸಾಗಾಣಿಕೆಗೆ ಬಳಸಿದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದೆ. ಆದ ಕಾರಣ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತ ಎಂದು ನಿರ್ಧರಿಸಿ ಈ ಕೆಳಕಂಡ ಆದೇಶ,

**ಆದೇಶ**

**ನಂ:ಇಎಕ್ಸ್‌ಇ:3:ಡಿಟಿಸಿಆರ್‌ಎಂ:21:2005-06, ದಿನಾಂಕ: 22ನೇ ಡಿಸೆಂಬರ್ 2005**

ಎನ್.ಎಂ. ಹುಸೇನ್, ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಕೊಡಗು ಜಿಲ್ಲೆ ಮಡಿಕೇರಿ, ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಎ) ನಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ನಿಯಮ 43(ಬಿ) ರನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಲಾದ ಕಾರಣ ಆರಕ್ಷಕ ಉಪ ನಿರೀಕ್ಷಕರು, ಗ್ರಾಮಾಂತರ ಠಾಣೆ, ವಿರಾಜಪೇಟೆ ಇವರ ಮೊಕದ್ದಮೆ ಸಂ: 81/2005 ದಿ:7.6.2005 ರಂದು ಜಪ್ತಿಪಡಿಸಿಕೊಂಡ ಮಾರುತಿ 800 ಕಾರ್ ಸಂ: ಎಂ.ಹೆಚ್.-01-ಎ-3013 ಮತ್ತು ಮೊಕದ್ದಮೆಯಲ್ಲಿ ವಶಪಡಿಸಿಕೊಂಡ 85 ಸಾರಾಯಿ ಪ್ಯಾಕೇಟು ಮತ್ತು 35 ಲೀಟರ್ ಮದ್ಯಸಾರಗಳಲ್ಲಿ ಸಾರಾಯಿಯ ಆಲ್ಕೋಹಾಲ್ ಪ್ರಮಾಣ 33.0% ಮತ್ತು 27.0% ವಿ.ವಿ. ಮತ್ತು ಮದ್ಯಸಾರದ ಪ್ರಮಾಣ 74.0% ವಿವಿ 60 ಡಿಗ್ರಿ ಎಫ್ ಇರುವುದಾಗಿ ಹಾಗೂ ಸದರಿ ಮಾದರಿಗಳು ಮದ್ಯ ಅಥವಾ ಸಾರಾಯಿ ತಯಾರಿಸಲು ಉತ್ತಮ ಮಟ್ಟದಲ್ಲಿ ಹೊಂದಿರುವುದಿಲ್ಲವಾಗಿ ದೃಢೀಕರಣ ಪತ್ರ ನೀಡಿರುವುದರಿಂದ ಸದರಿ ಸಾರಾಯಿ ಮತ್ತು ಮದ್ಯಸಾರವು ಮಾನವನ ಸೇವನೆಗೆ ಯೋಗ್ಯವಿಲ್ಲದ್ದರಿಂದ ಹಾಗೂ ಪ್ರಕರಣದ ಮುಖ್ಯಾಂಶದಲ್ಲಿ ಹೇಳಲಾದ ಕ್ರಮ ಸಂಖ್ಯೆ:1 ರಿಂದ 10 ರವರೆಗಿನ ಸೊತ್ತುಗಳನ್ನು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43 ಸಿ ಅನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ವಶಪಡಿಸಿಕೊಂಡ ನಕಲಿ ಸಾರಾಯಿಯು ಅಧಿಕೃತ ಡಿಸ್ಟಿಲ್ಲರಿಗಳಿಂದ ತಯಾರಾದ ಬಗ್ಗೆ ಯಾವುದೇ ಆಧಾರಗಳು ಲಭ್ಯವಿಲ್ಲದಿದ್ದು, ಇದು ಅನಧಿಕೃತ ತಯಾರಿಕಾ ಸಾರಾಯಿ ಎಂಬುದಾಗಿ ಸಾಬೀತಾಗಿರುತ್ತದೆ. ಇಂತಹ ಸಾರಾಯಿ ಮತ್ತು ಮದ್ಯಸಾರವು ಸಾರ್ವಜನಿಕರ ಉಪಯೋಗಕ್ಕೆ ಯೋಗ್ಯವಿಲ್ಲದ್ದರಿಂದ ಹಾಗೂ ಸಾರ್ವಜನಿಕರ ಆರೋಗ್ಯದ ಹಿತದೃಷ್ಟಿಯಿಂದ ಇದನ್ನು ನಾಶಪಡಿಸುವುದು ಸೂಕ್ತವಾಗಿರುವುದರಿಂದ ಸದರಿ ಸಾರಾಯಿ ಮತ್ತು ಮದ್ಯಸಾರವನ್ನು ಅಬಕಾರಿ ಉಪ ಅಧೀಕ್ಷಕರು, ಉಪ ವಿಭಾಗ, ವಿ.ಪೇಟೆ ಇವರ ಸಮಕ್ಷಮ ಮಹಜರು ಜರುಗಿಸಿ ನಾಶಪಡಿಸಲು ಹಾಗೂ ನಾಶಪಡಿಸಿ ಉಳಿದ ಒಂದು ಖಾಲಿ ಕ್ಯಾನ್ ಅನ್ನು ಪ್ರಸಕ್ತ ಮಾರುಕಟ್ಟೆಯಲ್ಲಿ ದಕ್ಕುವ ಬೆಲೆಗೆ ಮಾರಾಟ ಮಾಡಿ ಸಂಗ್ರಹಣೆಯನ್ನು ಸರ್ಕಾರಕ್ಕೆ ಪಾವತಿಸಿ ವರದಿ ಮಾಡಲು ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ಸಂ: 1 ಮಡಿಕೇರಿ ತಾಲ್ಲೂಕು ಇವರಿಗೆ ಆದೇಶಿಸಿದೆ.

ಮುಟ್ಟುಗೋಲು ಹಾಕಿಕೊಳ್ಳಲಾಗಿರುವ ವಾಹನವನ್ನು 30 ದಿನಗಳು ಕಳೆದ ನಂತರ ಕರ್ನಾಟಕ ಅಬಕಾರಿ (ಮುಟ್ಟುಗೋಲು ಸ್ವತ್ತುಗಳ ವಿಲೇವಾರಿ) ನಿಯಮಗಳ 1967ರ ಅನುಸಾರ ಬಹಿರಂಗ ಹರಾಜು ಮೂಲಕ ವಿಲೇಗೊಳಿಸಲು ಆದೇಶಿಸಿದೆ.

ಈ ಆದೇಶ ಇಂದು ಅಂದರೆ 22.12.05 ರಂದು ಬೆರಳಚ್ಚು ಮಾಡಿ ಬೆರಳಚ್ಚು ಮಾಡಿದ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು. ಈ ಆದೇಶ ಇಂದಿನಿಂದ 30 ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು,
ಕೊಡಗು ಜಿಲ್ಲೆ, ಮಡಿಕೇರಿ.

ಪಿ.ಆರ್. 54

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ರವರ ಕಾರ್ಯಾಲಯ

**ವಿಷಯ:** ಹೊಳಲ್ಕೆರೆ ತಾಲ್ಲೂಕು ಮಾಳೇನಹಳ್ಳಿ ವ್ಯವಸಾಯ ಸೇವಾ ಸಹಕಾರ ಸಂಘವನ್ನು ಪುನಃಶ್ಚೇತನಗೊಳಿಸುವ ವಿಚಾರ.

**ಉಲ್ಲೇಖ:**
1. ಈ ಕಛೇರಿಯ ಆದೇಶದ ಸಂಖ್ಯೆ:ಡಿಆರ್‌ಡಿ:ಎಡಿಎಂ:ಎಲ್‌ಕ್ಯೂಡಿ:ಸಿಆರ್-29:95-96, ದಿನಾಂಕ:27.1.1997.
2. ಸಹಕಾರ ಅಭಿವೃದ್ಧಿ ಅಧಿಕಾರಿ, ಹೊಳಲ್ಕೆರೆ ತಾಲ್ಲೂಕು ಇವರ ಪತ್ರ ದಿನಾಂಕ:29.10.2005.
3. ಸಂಘದ ಸಭಾ ನಡವಳಿಕೆ ದಿನಾಂಕ:12.10.2005.

**ಪ್ರಸ್ತಾವನೆ:**

ಚಿತ್ರದುರ್ಗ ಜಿಲ್ಲೆ ಹೊಳಲ್ಕೆರೆ ತಾಲ್ಲೂಕು ಮಾಳೇನಹಳ್ಳಿ ವ್ಯವಸಾಯ ಸೇವಾ ಸಹಕಾರ ಸಂಘವನ್ನು ಮೇಲ್ಕಂಡ ಉಲ್ಲೇಖಿತ ಪತ್ರದನ್ವಯ ಸಮಾಪನೆಗೊಳಿಸಲಾಗಿರುತ್ತದೆ. ಈ ಸಹಕಾರ ಸಂಘದ ಕಾರ್ಯವ್ಯಾಪ್ತಿಗೆ ಒಟ್ಟು 06 ಗ್ರಾಮಗಳು ಸೇರಿರುತ್ತವೆ. ಈ 06 ಗ್ರಾಮಗಳನ್ನು, ಸದರಿ ಸಂಘವನ್ನು ಸಮಾಪನೆಗೊಳಿಸಿದ ನಂತರ ತಾಲ್ಲೂಕಿನ ಯಾವುದೇ ವ್ಯವಸಾಯ ಸೇವಾ ಸಹಕಾರ ಸಂಘದ ಕಾರ್ಯವ್ಯಾಪ್ತಿಗೆ ಒಳಪಡಿಸದೇ ಇರುವುದರಿಂದ ಈ ವ್ಯಾಪ್ತಿಯ ಗ್ರಾಮಗಳ ರೈತರಿಗೆ ಜಿಲ್ಲಾ ಬ್ಯಾಂಕಿನಿಂದ ಸಿಗಬಹುದಾದ ಕಿಸಾನ್ ಕ್ರೆಡಿಟ್ ಸಾಲ ಶೇಕಡಾ 6 ರ ಬಡ್ಡಿ ರಿಯಾಯ್ತಿ ಸಾಲ, ಬಡ್ಡಿ ಮನ್ನಾ ಯೋಜನೆಯ ಸಾಲ ಸೌಲಭ್ಯಗಳಿಂದ ವಂಚಿತರಾಗಿರುತ್ತಾರೆ. ಈ ಎಲ್ಲಾ ಸೌಲಭ್ಯಗಳನ್ನು ಸರ್ಕಾರದಿಂದ ಹಾಗೂ ಬ್ಯಾಂಕಿನಿಂದ ಪಡೆಯುವ ಉದ್ದೇಶಕ್ಕೆ ಸಂಘವನ್ನು ಪುನಃಶ್ಚೇತನಗೊಳಿಸಬೇಕೆಂದು, ಉಲ್ಲೇಖ (3)ರ ನಡವಳಿಕೆಯಲ್ಲಿ ಸಂಘದ ವ್ಯಾಪ್ತಿಯಲ್ಲಿ ಬರುವ ರೈತ ಸದಸ್ಯರು ನಿರ್ಧರಿಸಿ ಸಂಘವನ್ನು ಪುನಃಶ್ಚೇತನಗೊಳಿಸಬೇಕೆಂದು ಕೋರಿಕೊಂಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಸಹಕಾರ ಅಭಿವೃದ್ಧಿ ಅಧಿಕಾರಿ, ಹೊಳಲ್ಕೆರೆ ತಾಲ್ಲೂಕು ರವರು ಉಲ್ಲೇಖ (2)ರ ಪತ್ರದ ಪ್ರಕಾರ ಶಿಫಾರಸ್ಸು ಮಾಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಈ ಸಹಕಾರ ಸಂಘವನ್ನು ಪುನಃಶ್ಚೇತನಗೊಳಿಸಬೇಕೆಂದು ತೀರ್ಮಾನಿಸಿ, ಈ ಕೆಳಕಂಡ ಷರತ್ತುಗಳೊಂದಿಗೆ ಈ ಕೆಳಕಂಡಂತೆ ಆದೇಶ ನೀಡಲಾಗಿರುತ್ತದೆ.

**ಆದೇಶ**

**ನಂ:ಡಿಆರ್‌ಡಿ: ಎಂಕೆಟಿ:ಎಲ್‌ಕ್ಯೂಡಿ:ಸಿಆರ್-22:ಪುನಶ್ಚೇತನ:05-06, ದಿನಾಂಕ: 30ನೇ ಅಕ್ಟೋಬರ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಮೇರೆಗೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(5)ರ ಪ್ರಕಾರ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:243:ಸಿಎಲ್‌ಎಂ:91, ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಟಿ.ಓ. ಸುನಂದಮ್ಮ, ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಆದ ನಾನು ಹೊಳಲ್ಕೆರೆ ತಾಲ್ಲೂಕು ಮಾಳೇನಹಳ್ಳಿ ವ್ಯವಸಾಯ

ಸೇವಾ ಸಹಕಾರ ಸಂಘವನ್ನು ಉಲ್ಲೇಖ (1)ರ ಮೇರೆಗೆ ಆದೇಶಿಸಲಾದ ಪರಿಸಮಾಪನಾ ಆದೇಶವನ್ನು ರದ್ದುಪಡಿಸಿ, ಸಂಘದ ಪುನಃಶ್ಚೇತನಕ್ಕೆ ಈ ಕೆಳಕಂಡ ಷರತ್ತುಗಳನ್ನು ವಿಧಿಸಿ ಆದೇಶಿಸಿರುತ್ತೇನೆ.

**ಷರತ್ತುಗಳು**

1) ಉಲ್ಲೇಖ (3)ರ ಪ್ರಕಾರ ನಡೆಸಲಾಗಿರುವ ಮೀಟಿಂಗ್ ನಡವಳಿಕೆ ಪ್ರಕಾರ; ಸಂಘದ ಪುನಃಶ್ಚೇತನ ಸಮಿತಿ ರೂಪಿಸಿರುವ ಕ್ರಿಯಾಯೋಜನೆಯಂತೆ 500 ಜನ ಸದಸ್ಯರಿಂದ ರೂ. 0.50 ಗಳ ಷೇರು ಬಂಡವಾಳವನ್ನು ಶೇಖರಿಸಿ ಸಂಘದ ಎಸ್.ಬಿ. ಖಾತೆಯಲ್ಲಿ ಜಮಾ ಮಾಡತಕ್ಕದ್ದು.

2) ಈ ಹಣ ಸಂಘದ ಎಸ್.ಬಿ. ಖಾತೆಯಲ್ಲಿ ಜಮಾ ಆದ ನಂತರವೇ ಸಂಘದ ಲಿಕ್ವಿಡೇಟರ್ ರವರು ಸಂಘದ ಮೊದಲನೇ ಮಹಾ ಸಭೆಯನ್ನು ಕರೆದು ಆಡಳಿತ ಮಂಡಳಿಯನ್ನು ಪುನರ್ ರಚಿಸತಕ್ಕದ್ದು. ಆಡಳಿತ ಮಂಡಳಿ ರಚನೆಗೆ ಚುನಾವಣಾಧಿಕಾರಿಯಾಗಿ ಸಹಕಾರ ಅಭಿವೃದ್ಧಿ ಅಧಿಕಾರಿ, ಹೊಳಲ್ಕೆರೆ ತಾಲ್ಲೂಕು ರವರನ್ನು ನೇಮಿಸಲಾಗಿರುತ್ತದೆ. ನಿಯಮಿಸಲಾದ ಚುನಾವಣಾಧಿಕಾರಿಯವರು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 14ರ ಪ್ರಕಾರ ಚುನಾವಣಾ ವೇಳಾ ಪಟ್ಟಿಯನ್ನು ನಮೂದಿಸಿ, ಸಂಘಕ್ಕೆ ಮೊದಲನೇ ಆಡಳಿತ ಮಂಡಳಿಯನ್ನು ರಚಿಸಲು ಆದೇಶಿಸಲಾಗಿದೆ.

ಈ ಆದೇಶವನ್ನು ನನ್ನ ಸ್ವಹಸ್ತ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಈ ದಿನ ಅಂದರೆ ದಿನಾಂಕ: 30.10.2005 ರಂದು ನೀಡಲಾಗಿರುತ್ತದೆ.

ಸಹಕಾರ ಸಂಘಗಳ ಉಪನಿಬಂಧಕರು,
ಪಿ.ಆರ್. 55 ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

## ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಾರ್ಯಾಲಯ

**ವಿಷಯ:** ಸಮಾಪನೆಗೊಂಡಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿ, ಹಿರೇಮೇಗಳಗೆರೆ ಇದನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(3) ರಡಿಯಲ್ಲಿ ಪುನಃಶ್ಚೇತನಗೊಳಿಸಲು ಆದೇಶಿಸುವ ಬಗ್ಗೆ.

**ಉಲ್ಲೇಖ:**
1. ಈ ಕಛೇರಿ ಆದೇಶ ಸಮಸಂಖ್ಯೆ ದಿನಾಂಕ: 30.9.2003.
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಇವರ ಪತ್ರ ಸಂ:ಸನಿಹ:ಹೆಚ್‌ಆರ್‌ಪಿ:ಸಮಾಪನೆ: ಸಿಆರ್:2005-06, ದಿನಾಂಕ:5.12.2005.
3. ಸಹಕಾರ ಅಭಿವೃದ್ಧಿ ಅಧಿಕಾರಿ ಹರಪನಹಳ್ಳಿ ಇವರ ಪತ್ರ ಸಂ:ಸಅಅಹ:ಸಮಾಪನೆ:ಹಾಉಸಸಂನಿ:ಹಿಮೇ:2005-06, ದಿನಾಂಕ: 17.11.2005.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ, ವಿಷಯ ಸೂಚಿತ ಸಂಘವು ಸ್ಥಗಿತಗೊಂಡಿದ್ದ ಕಾರಣ ಉಲ್ಲೇಖ (1)ರ ಮತ್ತು ಈ ಕಛೇರಿಯ ಆದೇಶದ ಪ್ರಕಾರ ಇದನ್ನು ಸಮಾಪನೆಗೊಳಿಸಲಾಗಿತ್ತು. ಸಂಘದ ಸದಸ್ಯರು ಸಂಘಕ್ಕೆ ಹಾಲನ್ನು ಪೂರೈಸಲು ಹಾಗೂ ಹಾಲು ಮಾರಾಟಕ್ಕೆ ಅನುಕೂಲವಾಗಲು ಸಂಘವನ್ನು ಮುಂದುವರೆಸಿಕೊಂಡು ಹೋಗಲು ಅವಕಾಶ ಮಾಡಿಕೊಡಲು ಕೋರಿರುವ ಕಾರಣ ಸಂಘವನ್ನು ಪುನಃಶ್ಚೇತನಗೊಳಿಸಲು ಉಲ್ಲೇಖ (3)ರಲ್ಲಿ ಸಹಕಾರ ಅಭಿವೃದ್ಧಿ ಅಧಿಕಾರಿ, ಹರಪನಹಳ್ಳಿ ಇವರು ಶಿಫಾರಸ್ಸು ಮಾಡಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಇವರು ಸಹ ಉಲ್ಲೇಖ (2) ರಲ್ಲಿ ಸದರಿ ಸಂಘವನ್ನು ಪುನಃಶ್ಚೇತನಗೊಳಿಸಬೇಕಾಗಿ ಶಿಫಾರಸ್ಸು ಮಾಡಿರುತ್ತಾರೆ. ಆದ ಪ್ರಯುಕ್ತ ಸಂಘವನ್ನು ಕಾರ್ಯ ಪ್ರವರ್ತವನ್ನಾಗಿ ಮಾಡಲು ಸಂಘದ ಸದಸ್ಯರು ಶ್ರಮಿಸಬೇಕೆಂಬ ನಿಬಂಧನೆಗೆ ಒಳಪಟ್ಟು ಉಲ್ಲೇಖ (1)ರ ಸಮಾಪನಾ ಆದೇಶವನ್ನು ರದ್ದುಗೊಳಿಸಿ ಸಂಘವನ್ನು ಮುಂದುವರೆಸಿಕೊಂಡು ಹೋಗಲು ಅನುಮತಿಯನ್ನು ನೀಡಲು ಉದ್ದೇಶಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ನಂ:ಡಿಆರ್:ಡಿವಿಜಿ:ಸಮಾಪನೆ:ಸಿಆರ್-45:2002-03, ದಿನಾಂಕ: 24ನೇ ಡಿಸೆಂಬರ್ 2005**

ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(3) ರನ್ವಯ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69: ಸಿಎಲ್ಎಂ:2001, ದಿನಾಂಕ: 21.11.2001 ರಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ದಾವಣಗೆರೆ ಜಿಲ್ಲೆಯ ಸಹಕಾರ ಸಂಘಗಳ ಉಪ ನಿಬಂಧಕರು, ಕೆ.ಎಂ. ಆಶಾ ಕೆ.ಸಿ.ಎಸ್ ಆದ ನಾನು ಹಾಲು ಉತ್ಪಾದಕರ ಸಹಕಾರ ಸಂಘ ನಿ, ಹಿರೇಮೇಗಳಗೇರಿ ಹರಪನಹಳ್ಳಿ ತಾ: ಇದರ ಉಲ್ಲೇಖ (1) ರಲ್ಲಿ ಸಮಾಪನಾ ಆದೇಶವನ್ನು ರದ್ದುಗೊಳಿಸಿ ಈ ಸಂಘವನ್ನು ಮುಂದುವರೆಸಿಕೊಂಡು ಹೋಗಲು ಅವಕಾಶ ಮಾಡುತ್ತಾ ಈ ಮೂಲಕ ಸಂಘವನ್ನು ಪುನಃಶ್ಚೇತನಕ್ಕಾಗಿ ಆದೇಶಿಸಿರುತ್ತೇನೆ.

ಪುನಃಶ್ಚೇತನಗೊಂಡ ನಂತರ ಸಂಘದ ಪ್ರಥಮ ಮಹಾ ಸಭೆಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳ ಪ್ರಕಾರ ಜರುಗಿಸಲು ಸಂಘದ ಕಾರ್ಯದರ್ಶಿಗಳಿಗೆ ಸೂಚಿಸಿದೆ ಹಾಗೂ ನೂತನ ಆಡಳಿತ ಮಂಡಳಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳ ಪ್ರಕಾರ ರಚಿಸಲು ಮಾರ್ಗ ವಿಸ್ತರಣಾಧಿಕಾರಿಗಳು, ಹರಪನಹಳ್ಳಿ ಇವರನ್ನು ಚುನಾವಣಾಧಿಕಾರಿಯಾಗಿ ನೇಮಿಸಲಾಗಿದೆ. ಈ ಕಾರ್ಯವನ್ನು ಜರುಗಿಸಿ ಹಾಗೂ ಮಹಾ ಸಭೆಯಲ್ಲಿ ಹಾಜರಾಗಿ ಈ ಕಛೇರಿಗೆ ವರದಿ ಮಾಡಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ದಿನಾಂಕ: 24.12.2005 ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಪಿ.ಆರ್. 56 ದಾವಣಗೆರೆ ಜಿಲ್ಲೆ, ದಾವಣಗೆರೆ.

## ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಾರ್ಯಾಲಯ

**ವಿಷಯ:** ಸಮಾಪನೆಗೊಂಡಿರುವ ಚನ್ನಗಿರಿ ಟೌನ್ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ, ಚನ್ನಗಿರಿ ಇದರ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ:**
1. ಈ ಕಛೇರಿ ಆದೇಶ ಸಮಸಂಖ್ಯೆ ಸಮಾಪನಾ ಆದೇಶ ದಿನಾಂಕ: 25.11.2005.
2. ಸಹಕಾರ ಅಭಿವೃದ್ಧಿ ಅಧಿಕಾರಿ, ಚನ್ನಗಿರಿ ಹಾಗೂ ಸಮಾಪನಾಧಿಕಾರಿಗಳ ಪ್ರಸ್ತಾವನೆ ಪತ್ರ ಸಂ:ಸಅಅ ಚನ್ನಗಿರಿ ಸ್ಥಗಿತ:19:2005-06 ದಿನಾಂಕ: 22.12.2005.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ಸಂ:ಸನಿ-24:ಸಾಮಾನ್ಯ:ನೋಂದಣಿ: 18807:1992-03 ದಿನಾಂಕ:7.1.1993 ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಹಾಲಿ ಕಾರ್ಯ ಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ ಈ ಸಂಘವನ್ನು ಮುಂದುವರೆಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1) ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ ಚನ್ನಗಿರಿ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಜವಾಬ್ದಾರಿಯನ್ನು ವಿಲೇ ಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ದಿನಾಂಕ:22.12.2005 ರಂದು ಜರುಗಿದ ಸಮಾಪನಾಧಿಕಾರಿಗಳ ಸಭೆಯಲ್ಲಿ ಮಾನ್ಯ ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಇವರನ್ನು ಕೋರಲು ತೀರ್ಮಾನಿಸಿ ಸೂಕ್ತ ಪ್ರಸ್ತಾವನೆಯನ್ನು ಉಲ್ಲೇಖ (2)ರ ಪತ್ರದ ರೀತ್ಯಾ ಸಲ್ಲಿಸಿರುತ್ತಾರೆ. ಪ್ರಸ್ತಾವೆ ಅಂಶಗಳನ್ನು ಪರಿಗಣಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ನಂ:ಡಿಆರ್:ಡಿವಿಜಿ:ಸಮಾಪನೆ:ಸಿಆರ್-17:2005-06, ದಿನಾಂಕ: 24ನೇ ಡಿಸೆಂಬರ್ 2005**

ಪ್ರಸ್ತಾವನೆಯಲ್ಲಿರುವ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ದಾವಣಗೆರೆ ಜಿಲ್ಲೆಯ ಸಹಕಾರ ಸಂಘಗಳ ಉಪ ನಿಬಂಧಕರು, ಕೆ.ಎಂ. ಆಶಾ ಆದ ನಾನು ಸಮಾಪನೆಗೊಂಡ ಚನ್ನಗಿರಿ ಟೌನ್ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ, ಚನ್ನಗಿರಿ ಇದರ ನೋಂದಣಿ ಸಂ:ಸನಿ24:ಸಾಮಾನ್ಯ ನೋಂದಣಿ:18807:1992-03 ದಿನಾಂಕ: 7.1.1993 ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ದತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘಗಳ ಕಾರ್ಯ ಚಟುವಟಿಕೆಗಳು ನಿಂತು ಹೋಗಿರುತ್ತೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು. ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ರ ನಿಯಮ 23(ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಹಾಗೂ ಈ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 24.12.2005 ರಂದು ಈ ಆದೇಶವನ್ನು ಹೊರಡಿಸಲಾಗಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಪಿ.ಆರ್. 57 ದಾವಣಗೆರೆ ಜಿಲ್ಲೆ, ದಾವಣಗೆರೆ.

## ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಾರ್ಯಾಲಯ

**ವಿಷಯ:** ಸಮಾಪನೆಗೊಂಡಿರುವ ಕನಕಾರ್ಥಿಕಭಿವೃದ್ಧಿ ಸಹಕಾರ ಸಂಘ ನಿ, ದಾವಣಗೆರೆ ತಾ: ಇದನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(3) ರಡಿಯಲ್ಲಿ ಪುನಃಶ್ಚೇತನಗೊಳಿಸಲು ಆದೇಶಿಸುವ ಬಗ್ಗೆ.

**ಉಲ್ಲೇಖ:**
1. ಈ ಕಛೇರಿ ಆದೇಶ ಸಮಸಂಖ್ಯೆ ದಿನಾಂಕ:
2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪತ್ರ ಸಂ:ಸನಿ31:ಎಲ್‌ಕ್ಯೂಡಿ:ಕನಕಾರ್ಥಿಕ: ಅಸಪ:ಸಿಆರ್:2005-06 ದಿನಾಂಕ:8.12.2005.
3. ಸಹಕಾರ ಸಂಘಗಳ ನಿರೀಕ್ಷಕರು, 1ನೇ ವೃತ್ತ ದಾವಣಗೆರೆ ಇವರ ಪತ್ರ ದಿನಾಂಕ: 29.11.2005.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ, ವಿಷಯ ಸೂಚಿತ ಸಂಘವು ಸ್ಥಗಿತಗೊಂಡಿದ್ದು, ಕಾರಣ ಉಲ್ಲೇಖ (1)ರ ಈ ಕಛೇರಿಯ ಆದೇಶದ ಪ್ರಕಾರ ಇದನ್ನು ಸಮಾಪನೆಗೊಳಿಸಲಾಗಿತ್ತು. ಸಂಘದ ಸದಸ್ಯರು ಸಂಘವನ್ನು ಮುಂದುವರೆಸಿಕೊಂಡು ಹೋಗಲು ಅವಕಾಶ ಮಾಡಿಕೊಡಲು ದಿನಾಂಕ 20.11.2005 ರಂದು ಜರುಗಿದ ಸರ್ವ ಸದಸ್ಯರ ಸಭೆಯಲ್ಲಿ ತೀರ್ಮಾನಿಸಿದ್ದು, ಸಂಘವನ್ನು ಪುನಃಶ್ಚೇತನಗೊಳಿಸಲು ಅವಕಾಶ ಮಾಡಿಕೊಡಲು ಉಲ್ಲೇಖ (3) ರಲ್ಲಿ ಸಹಕಾರ ಸಂಘಗಳ ನಿರೀಕ್ಷಕರು, 1ನೇ ವೃತ್ತ ದಾವಣಗೆರೆ ಇವರು ಹಾಗೂ ಉಲ್ಲೇಖ (2) ರಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರು ಶಿಫಾರಸ್ಸು ಮಾಡಿರುತ್ತಾರೆ. ಸರ್ವ ಸದಸ್ಯರ ಸಭೆಯಲ್ಲಿ ಸಂಘವನ್ನು ಪುನಃಶ್ಚೇತನಗೊಳಿಸಲು ರೂಪಿಸಿರುವ 5 ವರ್ಷಗಳ ಕ್ರಿಯಾ ಯೋಜನೆ ವರದಿಯ ರೀತ್ಯಾ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುವ ಷರತ್ತಿಗೆ ಒಳಪಟ್ಟು ಈ ಸಂಘವನ್ನು ಮುಂದುವರೆಸಿಕೊಂಡು ಹೋಗಲು ಅನುಮತಿ ನೀಡಲು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

**ನಂ:ಡಿಆರ್:ಡಿವಿಜಿ:ಸಮಾಪನೆ:ಸಿಆರ್-34:2004-05, ದಿನಾಂಕ: 24ನೇ ಡಿಸೆಂಬರ್ 2005**

ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(3) ರನ್ವಯ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69: ಸಿಎಲ್‌ಎಂ:2001, ದಿನಾಂಕ: 21.11.2001 ರಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ದಾವಣಗೆರೆ ಜಿಲ್ಲೆಯ ಸಹಕಾರ ಸಂಘಗಳ ಉಪ ನಿಬಂಧಕರು, ಕೆ.ಎಂ. ಆಶಾ ಆದ ನಾನು ಕನಕಾರ್ಥಿಕಭಿವೃದ್ಧಿ ಸಹಕಾರ ಸಂಘ ನಿ, ದಾವಣಗೆರೆ, ಇದರ ಉಲ್ಲೇಖ (1) ರ ಸಮಾಪನಾ ಆದೇಶವನ್ನು ರದ್ದುಗೊಳಿಸಿ ಈ ಸಂಘವನ್ನು ಮುಂದುವರೆಸಿಕೊಂಡು ಹೋಗಲು ಅವಕಾಶ ಮಾಡುತ್ತಾ ಈ ಮೂಲಕ ಸಂಘವನ್ನು ಪುನಃಶ್ಚೇತನಕ್ಕಾಗಿ ಆದೇಶಿಸಿರುತ್ತೇನೆ.

ಪುನಃಶ್ಚೇತನಗೊಂಡ ನಂತರ ಸಂಘದ ಪ್ರಥಮ ಮಹಾಸಭೆಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳ ಪ್ರಕಾರ ಜರುಗಿಸಲು ಸಂಘದ ಕಾರ್ಯದರ್ಶಿಗಳಿಗೆ ಸೂಚಿಸಿದೆ. ಹಾಗೂ ನೂತನ ಆಡಳಿತ ಮಂಡಳಿಯನ್ನು ರಚಿಸಲು ಸಹಕಾರ ಸಂಘಗಳ ನಿರೀಕ್ಷಕರು 1ನೇ ವೃತ್ತ ದಾವಣಗೆರೆ ಇವರನ್ನು ಚುನಾವಣಾಧಿಕಾರಿಯಾಗಿ ನೇಮಿಸಲಾಗಿದೆ. ಈ ಕಾರ್ಯವನ್ನು ಜರುಗಿಸಿ ಹಾಗೂ ಮಹಾಸಭೆಯಲ್ಲಿ ಹಾಜರಾಗಿ ಈ ಕಛೇರಿಗೆ ವರದಿ ಮಾಡಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸ್ವಹಸ್ತ ಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ದಿನಾಂಕ: 24.12.2005 ರಂದು ಹೊರಡಿಸಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಪಿ.ಆರ್. 58 ದಾವಣಗೆರೆ ಜಿಲ್ಲೆ, ದಾವಣಗೆರೆ.

**DEPARTMENT OF PERSONNEL AND ADMINISTRATIVE REFORMS**

**NOTIFICATION**

**No. DPAR 15 SMR 2005, Bangalore, Dated: 27th December 2005**

In exercise of the powers conferred by clause (ff) of rule 3 of the Karnataka Government Servants (Medical Attendance) Rules 1963, the Government of Karnataka hereby adds -

I. the following items after item 146 of schedule I to the said rules, namely:-

(147) Malnad Nursing Home, K.R. Puram, Hassan.
(148) Ashwini Nursing Home, P.J. Extension, Davangere-577 002
(149) St. Theresa's Hospital, Rajajinagar, Bangalore-10
(150) Mediscope Hospital Pvt. Ltd., Pillana Garden, Bangalore-45.
(151) Sri Venkateshwara Nursing Home, Srinivasapur-563 135
(152) Ashraya Hospital, MCC 'A' Block, Davangere-577 004
(153) City Medical Centre, MMC 'B' Block, Davangere.

II. the following items after item 15 under sub heading "Diagnostic Centres" of the schedule I to the said rules namely:-

(16) Bhagavan Pathology Laboratory, Srirampet, Mysore-570 001
(17) Dr.Karigoudar Laboratory, Bijapur-586 101.
(18) Santosh Diagnostic & Scan Centre. St.John's Church Road, Bangalore-560 005

By Order and in the name of Governor of Karnataka

**DEVARAJU**

Under Secretary to Government,

Department of Personnel and Administrative Reforms (Service Rules-1)

P.R. 59

**ಜಿಲ್ಲಾಧಿಕಾರಿಯವರ ಕಛೇರಿ, ಉಡುಪಿ ಜಿಲ್ಲೆ, ಉಡುಪಿ**

**ಅಧಿಸೂಚನೆ**

**ನಂಬ್ರ: ಆರ್‌ಟಿಎ ಸಿಆರ್ 143:2004-05, ದಿನಾಂಕ: 31ನೇ ಡಿಸೆಂಬರ್ 2005**

ಉಡುಪಿ ಜಿಲ್ಲೆ, ಕುಂದಾಪುರ ತಾಲ್ಲೂಕು, ಕುಂದಾಪುರ ಕಸಬಾ ಶಾಸ್ತ್ರಿ ವೃತ್ತದಿಂದ ಕುಂದಾಪುರ ಹೊಸ ಖಾಸಗಿ ಬಸ್ ನಿಲ್ದಾಣದವರೆಗೆ ಹೋಗುವ ಮತ್ತು ನಿಲ್ದಾಣದ ಕಡೆಯಿಂದ ಬರುವ ಎರಡು ಕಡೆಯ ರಸ್ತೆಗಳಲ್ಲಿ ಮತ್ತು ಬಸ್ಸು ನಿಲ್ದಾಣದ ಸುತ್ತ ಮುತ್ತ ಶಬ್ದಮಾಲಿನ್ಯವನ್ನು ಸಾರ್ವಜನಿಕ ಹಿತ ದೃಷ್ಟಿಯಿಂದ ತಡೆಗಟ್ಟಲು ವಾಕ್ಯೂಮ್ ಹಾರ್ನ್‌ನಿಂದ ಉಂಟಾಗುವ ಶಬ್ದ ಮಾಲಿನ್ಯ ನಿಷೇಧಿಸುವಂತೆ, ಕುಂದಾಪುರ ಕಸಬಾ ಪೇಟೆಯ ಸಾರ್ವಜನಿಕರು, ಮನವಿ ಸಲ್ಲಿಸಿ ಕೋರಿರುತ್ತಾರೆ.

ಈ ವಿಚಾರದಲ್ಲಿ ಜಿಲ್ಲಾ ಪೊಲೀಸು ಅಧೀಕ್ಷಕರು, ಉಡುಪಿ ಮತ್ತು ಪ್ರಾದೇಶಿಕ ಸಾರಿಗೆ ಅಧಿಕಾರಿ, ಉಡುಪಿ ಇವರಿಂದ ಪರಿಶೀಲಿಸಿ ಅಭಿಪ್ರಾಯ ಪಡೆಯಲಾಗಿದ್ದು, ಅವರು ಸಹ ಈ ವಿಚಾರದಲ್ಲಿ ತಮ್ಮ ಸಹಮತ ವ್ಯಕ್ತಪಡಿಸಿರುತ್ತಾರೆ. ಈ ಎಲ್ಲಾ ಅಭಿಪ್ರಾಯಗಳನ್ನು ಕ್ರೋಢೀಕರಿಸಿ ಪರಿಶೀಲಿಸಿದ್ದು, ಕುಂದಾಪುರ ಶಾಸ್ತ್ರಿ ವೃತ್ತದ ಪ್ರಾರಂಭದಲ್ಲಿ ಕಾಲೇಜು ವಿದ್ಯಾ ಸಂಸ್ಥೆ, ತಾಲ್ಲೂಕು ಪಂಚಾಯಿತಿ ಕಛೇರಿಗಳಿದ್ದು, ಹೊಸ ಖಾಸಗಿ ಬಸ್ ನಿಲ್ದಾಣಕ್ಕೆ ಹೋಗುವ ಎರಡೂ ರಸ್ತೆ ಅಕ್ಕ ಪಕ್ಕದ ಬದಿಯಲ್ಲಿ ಸರಕಾರಿ ಆಸ್ಪತ್ರೆ, ಪದವಿಪೂರ್ವ ಕಾಲೇಜು, ಪ್ರಾಥಮಿಕ ವಿದ್ಯಾ ಸಂಸ್ಥೆ, ಬ್ಯಾಂಕ್ ವಾಣಿಜ್ಯ ಸಂಸ್ಥೆಗಳು ಇರುತ್ತದೆ. ಮತ್ತು ಹೊಸ ಖಾಸಗಿ ಬಸ್ ನಿಲ್ದಾಣದ ಸುತ್ತ ಮುತ್ತ ನ್ಯಾಯಾಲಯಗಳ ಕಛೇರಿ, ಉಪ ವಿಭಾಗಾಧಿಕಾರಿಗಳ ಕಛೇರಿ, ಪೊಲೀಸ್ ಠಾಣಾ ಕಛೇರಿ, ತಾಲ್ಲೂಕು ಕಛೇರಿ, ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ ಇತ್ಯಾದಿ ಪ್ರಮುಖ ಕಛೇರಿ ಸಂಕೀರ್ಣಗಳು ಇರುತ್ತವೆ. ಈ ಎರಡೂ ಬದಿಯ ರಸ್ತೆಗಳು ಅತೀ ಜನಸಂದಣೀಯ ಪ್ರದೇಶವಾಗಿದ್ದು, ಇಲ್ಲಿ ಸಂಚರಿಸುವ ವಾಹನಗಳು ಅನಾವಶ್ಯಕವಾಗಿ ಪದೇ ಪದೇ ವಾಕ್ಯೂಮ್‌ಹಾರ್ನ್ ಬಳಸುವುದರಿಂದ ಕರ್ಕಷ ಧ್ವನಿ ಮಾಧ್ಯಮವು ಸಾರ್ವಜನಿಕರಿಗೆ ವೇದನೆ ಉಂಟಾಗುವುದನ್ನು ಮನಗಂಡು, ಸಾರ್ವಜನಿಕ ಹಿತದೃಷ್ಟಿಯಿಂದ, ಹಾಗೂ ಶಬ್ದ ಮಾಲಿನ್ಯ ತಡೆಗಟ್ಟುವ ಸಲುವಾಗಿ ಉಡುಪಿ ಜಿಲ್ಲೆ, ಕುಂದಾಪುರ ಕಸಬಾ, ಶಾಸ್ತ್ರಿ ವೃತ್ತದಿಂದ ಹೊಸ ಬಸ್ ಖಾಸಗಿ ನಿಲ್ದಾಣದವರೆಗೆ ಹೋಗುವ ಹಾಗೂ ನಿಲ್ದಾಣದ ಕಡೆಯಿಂದ ಬರುವ ಎರಡು ಕಡೆಯ ರಸ್ತೆಯ ಅಕ್ಕ ಪಕ್ಕಗಳಲ್ಲಿನ ಮತ್ತು ಹೊಸ ಖಾಸಗಿ ಬಸ್ ಸ್ಟಾಂಡಿನ ಸುತ್ತ ಮುತ್ತಲಿನ ಪ್ರದೇಶವನ್ನು ವಾಹನಗಳ ಹಾರ್ನ್ ಬಳಕೆಯ ನಿಷೇಧಿತ ಪ್ರದೇಶವೆಂದು ನಿಷೇಧಿಸುವುದು ಅವಶ್ಯಕವೆಂದು ಮನಗಂಡು ಶ್ರೀ ಟಿ. ಶ್ಯಾಮ್ ಭಟ್, ಭಾ.ಆ.ಸೇ. ಜಿಲ್ಲಾ ದಂಡಾಧಿಕಾರಿ, ಉಡುಪಿ ಜಿಲ್ಲೆ ಆದ ನಾನು ಕರ್ನಾಟಕ ಮೋಟಾರು ವಾಹನ ನಿಯಮಾವಳಿ 1989ರ ನಿಯಮ 211 ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡಂತೆ ಆದೇಶ ನೀಡಿರುತ್ತೇನೆ.

ಕುಂದಾಪುರ ಕಸಬಾ ಪೇಟೆಯ ಶಾಸ್ತ್ರಿ ವೃತ್ತದಿಂದ ಪ್ರಾರಂಭಗೊಂಡು ಹೊಸ ಖಾಸಗಿ ಬಸ್ಸು ನಿಲ್ದಾಣದವರೆಗೆ ಹೋಗುವ ಮತ್ತು ಬರುವ ಈ ಎರಡೂ ರಸ್ತೆಗಳ ಅಕ್ಕಪಕ್ಕದಲ್ಲಿ ಮತ್ತು ಹೊಸ ಖಾಸಗಿ ಬಸ್ಸು ನಿಲ್ದಾಣದ ಸುತ್ತ ಮುತ್ತಲಿನ ಪ್ರದೇಶವನ್ನು ವಾಹನಗಳ ವಾಕ್ಯೂಮ್ ಹಾರ್ನ್ ಬಳಕೆಯ ನಿಷೇಧಿತ ಪ್ರದೇಶವೆಂದು ಘೋಷಿಸಿ ಸೂಕ್ತ ಸಂಜ್ಞಾ ಫಲಕವನ್ನು ಅಳವಡಿಸಲು ಆದೇಶಿಸಿದೆ.

ಮೋಟಾರು ವಾಹನ ನಿಯಮಾವಳಿ 1989ರ ನಿಯಮ 211 ರಂತೆ, ಈ ಬಗ್ಗೆ ಸೂಕ್ತವೆಂದು ತೋರುವ ಸ್ಥಳಗಳಲ್ಲಿ ಸಂಜ್ಞಾ ಫಲಕವನ್ನು ಮೋಟಾರು ವಾಹನ ಕಾಯ್ದೆ 1988 ರ ಕಲಂ 116 ರನ್ವಯ ಹಾಗೂ ಪಾರ್ಟ್ ಎ ಶೆಡ್ಯೂಲ್ ಪ್ರಕಾರ ಜಿಲ್ಲಾ ಪೊಲೀಸ್ ಅಧೀಕ್ಷಕರು, ಉಡುಪಿ ಇವರು ಅಳವಡಿಸುವಂತೆ ಕ್ರಮಕೈಗೊಳ್ಳಲು ಆದೇಶಿಸಿದೆ.

ಮೇಲಿನ ಆದೇಶವು ದಿನಾಂಕ: 5.12.2005 ರಿಂದ ಮುಂದಿನ ಆದೇಶ ಹೊರಡಿಸುವ ತನಕ ಜಾರಿಯಲ್ಲಿರುತ್ತದೆ.

ಈ ಅಧಿಸೂಚನೆ ನನ್ನ ಸಹಿ ಮತ್ತು ಮುದ್ರೆಯೊಂದಿಗೆ ಹೊರಡಿಸಿರುತ್ತೇನೆ.

ಜಿಲ್ಲಾ ದಂಡಾಧಿಕಾರಿ,

ಹಾಗೂ ಜಿಲ್ಲಾಧಿಕಾರಿ, ಉಡುಪಿ ಜಿಲ್ಲೆ, ಉಡುಪಿ.

ಪಿ.ಆರ್. 60

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

**ತಿದ್ದುಪಡಿ ಸಂಖ್ಯೆ: ಸಿಆಸುಇ 20 ಹೆಚ್‌ಹೆಚ್‌ಎಲ್ 2005, ಬೆಂಗಳೂರು, ದಿನಾಂಕ: 30ನೇ ಡಿಸೆಂಬರ್ 2005**

2006ನೇ ಸಾಲಿಗೆ ನೆಗೋಷಿಯೇಬಲ್ ಇನ್‌ಸ್ಟ್ರುಮೆಂಟ್ ಆ್ಯಕ್ಟ್ ಅಡಿಯಲ್ಲಿ ಘೋಷಿಸಿದ ರಜೆಗಳ ಅಧಿಸೂಚನೆ-II, ಸಂಖ್ಯೆ: ಡಿಪಿಎಆರ್ 20 ಹೆಚ್‌ಹೆಚ್‌ಎಲ್ 2005, ದಿನಾಂಕ: 29.11.2005ರಲ್ಲಿಯ ಕ್ರಮ ಸಂಖ್ಯೆ:12 ರಲ್ಲಿ 29.9.2006 ಶುಕ್ರವಾರ ಅರ್ಧವಾರ್ಷಿಕ ಲೆಕ್ಕ ಪತ್ರ ಮುಕ್ತಾಯದ ದಿನ ಎಂಬುದರ ಬದಲಾಗಿ ಈ ಕೆಳಗಿನಂತೆ ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

| | | |
|---|---|---|
| 12 | 30.09.2006 - ಶನಿವಾರ | ಅರ್ಧ ವಾರ್ಷಿಕ ಲೆಕ್ಕ ಪತ್ರ ಮುಕ್ತಾಯ ದಿನ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಎನ್. ಪ್ರಸಾದ್**

ಪಿ.ಆರ್. 61 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ರಾಜ್ಯ ಶಿಷ್ಟಾಚಾರ)

## ಒಳಾಡಳಿತ ಇಲಾಖೆ

**ಅಧಿಸೂಚನೆ ಸಂಖ್ಯೆ: ಒಇ 869 ಪಿಪಿಇ 2005, ಬೆಂಗಳೂರು, ದಿನಾಂಕ: 27ನೇ ಡಿಸೆಂಬರ್ 2005**

ಬೆಂಗಳೂರು ನಗರದ ಸಿ.ಸಿ.ಹೆಚ್. 35 ವಿಶೇಷ ನ್ಯಾಯಾಲಯದಲ್ಲಿ, ಬೆಂಗಳೂರು ನಗರದ ಯಶವಂತಪುರ ಪೊಲೀಸ್ ಠಾಣೆಯ ಮೊಕದ್ದಮೆ ಸಂಖ್ಯೆ:702:02 ರಿಂದ ಉದ್ಭವಿಸಿರುವ ಎಸ್.ಸಿ. ನಂ.52:2005ರಲ್ಲಿ ಸರ್ಕಾರದ ಪರವಾಗಿ ಹಾಜರಾಗಲು ಮತ್ತು ಪ್ರಕರಣ:ಪ್ರಕರಣಗಳನ್ನು ನಡೆಸಲು ಸರ್ಕಾರಿ ಅಭಿಯೋಜಕರು, 34ನೇ ಅಪರ ಸಿಟಿ ಸಿವಿಲ್ ಹಾಗೂ ಸತ್ರ ನ್ಯಾಯಾಲಯ (ಪರಪ್ಪನ ಅಗ್ರಹಾರ ಕೇಂದ್ರ ಕಾರಾಗೃಹ ಆವರಣ), ಬೆಂಗಳೂರು ಇವರನ್ನು ವಿಶೇಷ ಸರ್ಕಾರಿ ಅಭಿಯೋಜಕರಾಗಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 62 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ. (ಕಾ ಮತ್ತು ಸು ಮತ್ತು ಕಾಫಿಪೋಸ್ ಮತ್ತು ಅಭಿಯೋಗಗಳು)

## ಸಾರ್ವಜನಿಕ ಶಿಕ್ಷಣ ಇಲಾಖೆ ಉಪನಿರ್ದೇಶಕರ ಕಾರ್ಯಾಲಯ ಚಿಕ್ಕೋಡಿ (ಬೆಳಗಾವಿ ಉತ್ತರ)

**ಸಂಖ್ಯೆ: ಇ2/ನೇಮಕ/ಪ್ರಕಟಣೆ/2005-06/4117, ದಿನಾಂಕ: 22ನೇ ಡಿಸೆಂಬರ್ 2005**

**ಪ್ರಕಟಣೆ**

2005-06ನೇ ಸಾಲಿನ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿ ಅಧಿಸೂಚನೆ ಮತ್ತು ಅರ್ಜಿಸಹಿತಿ ಮಾಹಿತಿ ಪುಸ್ತಕ ಅಧ್ಯಾಯ-2ರ ಪುಟ ಸಂಖ್ಯೆ 14ರ 6[1][ಎ][3]ರ ಮೀಸಲಾತಿಯನ್ನು ಶಿಕ್ಷಕರ ನೇಮಕಾತಿಗೆ ಅವಕಾಶವಿಲ್ಲವೆಂದು ಹಿಂತೆಗೆದುಕೊಳ್ಳಲಾಗಿದೆ.

6] ಪ್ರತಿ ಪ್ರವರ್ಗದಲ್ಲಿ ವಿವಿಧ ಗುಂಪುಗಳಿಗೆ ಮೀಸಲಾತಿ ಪ್ರಮಾಣ

1. ಅಂಗವಿಕಲ ಗುಂಪಿಗೆ ಕೆಳಗಿನವರು ಶಿಕ್ಷಕರ ನೇಮಕಾತಿಗೆ ಅರ್ಹರಾಗುತ್ತಾರೆ.

**ವಿವರಣೆ:-** ಅಂಗವಿಕಲ ಅಭ್ಯರ್ಥಿ ಎಂದರೆ [ಎ] 1 ಕಣ್ಣಿನ ದೃಷ್ಟಿಯನ್ನು ಸರಿಪಡಿಸುವ ಕನ್ನಡಕವನ್ನು ಹಾಕಿದಾಗ ಎರಡೂ ಕಣ್ಣಿನ ಪೈಕಿ ಉತ್ತಮವಾದ ಕಣ್ಣಿನಲ್ಲಿ 6.60 ಅಥವಾ 20:2000 [ಸ್ನಲನ್] ಮೀರದಿರುವ ದೃಷ್ಟಿ ಸಾಮರ್ಥ್ಯ ಇರುವ ವ್ಯಕ್ತಿ.

ಅಥವಾ

2. 20 ಡಿಗ್ರಿಗಳು ಅಥವಾ ಅದಕ್ಕೂ ಕಡಿಮೆಯ ಕೋನದವರೆ ವಿಸ್ತರಿಸುವ ದೃಷ್ಟಿ ಕ್ಷೇತ್ರದ ಪರಿಮಿತಿಯನ್ನು ಹೊಂದಿರುವ ವ್ಯಕ್ತಿ.
3. ಸಂಪೂರ್ಣವಾಗಿ ದೃಷ್ಟಿ ಸಾಮರ್ಥ್ಯವನ್ನು ಕಳೆದುಕೊಂಡಿರುವ ವ್ಯಕ್ತಿಯು ಶಿಕ್ಷಕರ ನೇಮಕಾತಿಗೆ ಪರಿಗಣಿಸಲಾಗುವುದಿಲ್ಲ.

ಆಯ್ಕೆ ಪ್ರಾಧಿಕಾರಿ ಹಾಗೂ ಉಪನಿರ್ದೇಶಕರು

ಪಿ.ಆರ್. 63 [ಆಡಳಿತ] ಸಾರ್ವಜನಿಕ ಶಿಕ್ಷಣ ಇಲಾಖೆ, ಚಿಕ್ಕೋಡಿ [ಬೆಳಗಾವಿ ಉತ್ತರ]

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ-ವಿಭಾಗ-2, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಐ.ಟಿ.ಐ. ಆವರಣ, ಬೆಂಗಳೂರು-29

**ಪ್ರಕರಣ ಸಂಖ್ಯೆ: ಡಬ್ಲ್ಯುಸಿಎ:ಎಫ್‌ಸಿ:15/03 ದಿನಾಂಕ: 1ನೇ ಡಿಸೆಂಬರ್ 2005**

**ಅರ್ಜಿದಾರರು:**

1. ಶ್ರೀಮತಿ ಆಂಜನಮ್ಮ ಕೋಂ ಲೇಟ್ ಶ್ರೀರಾಮಪ್ಪ
2. ಶ್ರೀಮತಿ ಲಕ್ಷ್ಮೀದೇವಮ್ಮ ಕೋಂ ಲೇಟ್ ಶ್ರೀರಾಮಪ್ಪ
3. ಮುನಿಶ್ಯಾಮಪ್ಪ, (4) ಚಿನ್ನಮ್ಮ ಕೋಂ ಮುನಿಶ್ಯಾಮಪ್ಪ
5. ಗಣೇಶ್ ಬಿನ್ ಲೇಟ್ ಶ್ರೀರಾಮಪ್ಪ
6. ಪ್ರಭಾವತಿ ಡಾ:ಆಫ್ ಶ್ರೀರಾಮಪ್ಪ

ನಂ:208:ಎ 8ನೇ ಮೇನ್ ಶ್ರೀನಗರ, ಬೆಂಗಳೂರು.

ಅಪ್ಪಿರೆಡ್ಡಿ ಹಳ್ಳಿ, ಸೋಮನಹಳ್ಳಿ ಹೋಬಳಿ, ಗುಡಿಬಂಡೆ ತಾ: ಕೋಲಾರ.

ವಿರುದ್ಧ **ಪ್ರತಿವಾದಿಗಳು:**

1. ದಿ ಡಿವಿಜನಲ್ ಮ್ಯಾನೇಜರ್,

ಕೆ.ಎಸ್.ಆರ್.ಟಿ.ಸಿ. ರೀಜನಲ್ ಕಚೇರಿ,

ಕೆ.ಹೆಚ್. ರಸ್ತೆ, ಬೆಂಗಳೂರು.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಆಂಜನಮ್ಮ ಮತ್ತು ಇತರೆ 5 ಜನ ಇವರುಗಳು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ದಿವಂಗತ ಶ್ರೀರಾಮಪ್ಪ ಇವರು ಪ್ರತಿವಾದಿ ಇವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಅಪಘಾತ ಹೊಂದಿ ಮೃತಪಟ್ಟಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೆ ತಾವು ಮೃತರ ಅವಲಂಬಿತರಾದ್ದರಿಂದ ತಮಗೆ ಕಾಯ್ದೆಯನ್ವಯ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಪಿ.ಆರ್. 66 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಬೆಂಗಳೂರು, ಉಪವಿಭಾಗ-2, ಬೆಂಗಳೂರು.

## ನಿರ್ದೇಶನಾಲಯ, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ಬೆಂಗಳೂರು-1

### ಅಧಿಸೂಚನೆ

### ಸಂಖ್ಯೆ:ವಿನಿ/ಸಿಶಾ/1910/05-06, ದಿನಾಂಕ: 28ನೇ ಡಿಸೆಂಬರ್ 2005

ಸರ್ಕಾರದ ಅಧಿಸೂಚನೆ ಸಂ.ಆಇ/184/ಸಮಯ/2005, ದಿನಾಂಕ: 22.9.2005 ರಲ್ಲಿನ ಆದೇಶದಂತೆ ಹಾಗೂ 2005 ರ ಮಾಹಿತಿ ಹಕ್ಕು ಕಾಯ್ದೆ (2005ರ ಕೇಂದ್ರ ಕಾಯ್ದೆ ಸಂ.22) ಸೆಕ್ಷನ್ 5(1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ವಿಮಾ ಇಲಾಖಾ ಕಾರ್ಯಚಟುವಟಿಕೆಗಳಿಗೆ ಸಂಬಂಧಪಟ್ಟ ಮಾಹಿತಿಯನ್ನು ಕೋರುವ ವ್ಯಕ್ತಿಗಳಿಗೆ ಅಂತೆಯೇ ಮಾಹಿತಿಯನ್ನು ಮೇಲಿನ ಕಾಯಿದೆಯನ್ವಯ ಒದಗಿಸಲು ಈ ಕೆಳಕಂಡಂತೆ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಸಾರ್ವಜನಿಕ ಮಾಹಿತಿ ಅಧಿಕಾರಿ ಮತ್ತು ಮೇಲ್ಮನವಿ ಪ್ರಾಧಿಕಾರ ಎಂದು ನೇಮಕ ಮಾಡಲಾಗಿದೆ.

| ಕ್ರ. ಸಂ. | ವಿಭಾಗ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಸಾರ್ವಜನಿಕ ಮಾಹಿತಿ ಅಧಿಕಾರಿ | ಮೇಲ್ಮನವಿ ಪ್ರಾಧಿಕಾರ |
|---|---|---|---|---|
| 1. | ಜೀವ ವಿಮಾ ಶಾಖೆ | ಜಿಲ್ಲಾ ವಿಮಾ ಅಧಿಕಾರಿಗಳು ಹಾಗೂ ಸಹಾಯಕ ನಿರ್ದೇಶಕರು | ನಿರ್ದೇಶಕರ ಕೇಂದ್ರ ಕಛೇರಿ ಸಹಾಯಕರು | ನಿರ್ದೇಶಕರು |
| 2. | ವಾಹನ ಶಾಖೆ | ಜಿಲ್ಲಾ ವಿಮಾ ಅಧಿಕಾರಿಗಳು ಹಾಗೂ ಸಹಾಯಕ ನಿರ್ದೇಶಕರು | ಉಪ ನಿರ್ದೇಶಕರು ವಾಹನ ವಿಭಾಗ | ನಿರ್ದೇಶಕರು |
| 3. | ಕುಟುಂಬ ಕಲ್ಯಾಣ ನಿಧಿ ಶಾಖೆ | ಜಿಲ್ಲಾ ವಿಮಾ ಅಧಿಕಾರಿಗಳು | ಉಪ ನಿರ್ದೇಶಕರು ಬಿ.ಬಿ.ಟಿ. ಶಾಖೆ | ನಿರ್ದೇಶಕರು |

ನಿರ್ದೇಶಕರು,

ಪಿ.ಆರ್. 67 ವಿಮಾ ಇಲಾಖೆ.

## ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೊಂದಣಿ ಪ್ರಾಧಿಕಾರ ಚಿಕ್ಕಮಗಳೂರು ಇವರ ನಡವಳಿ

**ಉಪಸ್ಥಿತರು:** ಶ್ರೀ ಆರ್. ರಾಜಶೇಖರ್
ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೊಂದಣಿ ಪ್ರಾಧಿಕಾರ, ಚಿಕ್ಕಮಗಳೂರು.

**ವಿಷಯ:** ಕೆಎ-14:5106 (ಸ್ವೇ:ಕ್ಯಾ) ಇದರ ನೊಂದಣಿ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:**
1. ಮಾಲೀಕರು ಶ್ರೀ ಕೆ.ಟಿ. ಸುರೇಶ್, ಚಿಕ್ಕಮಗಳೂರು ಇವರ ಅರ್ಜಿ ದಿನಾಂಕ: 21.10.05
2. ಅಧ್ಯರ್ಪಣ ಸಂ: 21-2000-01 ದಿ:29.7.00
3. ಮೋಟಾರು ವಾಹನ ನಿರೀಕ್ಷಕರ ವರದಿ ದಿ: 9.8.05.

ಈ ಕಛೇರಿಯ ದಾಖಲೆಗಳಂತೆ ವಾಹನ ಸಂ: ಕೆಎ-14:5106 (ಸ್ವೇ:ಕ್ಯಾ) ಇದರ ನೊಂದಾಯಿತ ಮಾಲೀಕರಾದ ಶ್ರೀ ಕೆ.ಟಿ. ಸುರೇಶ್, ಚಿಕ್ಕಮಗಳೂರು ರವರು ಸದರಿ ವಾಹನದ ತೆರಿಗೆಯನ್ನು 31.8.00 ರವರೆಗೆ ಪಾವತಿಸಿ ಮುಂದಿನ ತೆರಿಗೆಯಿಂದ ವಿನಾಯಿತಿ ಪಡೆಯಲು ಸದರಿ ವಾಹನದ ಅನುಪಯೋಗದ ಮಾಹಿತಿ ನೀಡಿ ಕಛೇರಿಗೆ ವಾಹನದ ಎಲ್ಲಾ ದಾಖಲೆಗಳನ್ನು ಅಧ್ಯರ್ಪಣ ಸಂ:21:00-01 ರಲ್ಲಿ ದಿ:29.7.2000 ರಿಂದ ಅಧ್ಯರ್ಪಣ ಮಾಡಿದ್ದು, ಇಂದಿಗೂ ಅಧ್ಯರ್ಪಣ ಮುಂದುವರೆದಿದೆ.

ಕಛೇರಿಗೆ ದಿ:21.10.05 ರಂದು ಅರ್ಜಿ ಸಲ್ಲಿಸಿ ಈ ವಾಹನವು 1995ರ ಮಾಡೆಲ್ ಆಗಿದ್ದು ರಸ್ತೆಯಲ್ಲಿ ಓಡಿಸಲು ಅನರ್ಹವಿರುವುದಾಗಿ ಮಾಹಿತಿ ನೀಡಿ ನೊಂದಣಿ ರದ್ದುಪಡಿಸಲು ಕೋರಿರುತ್ತಾರೆ. ಪೂರಕವಾಗಿ ಈ ಕಛೇರಿಯಿಂದ ಮೋಟಾರು ವಾಹನ ನಿರೀಕ್ಷಕರವರು ಈ ವಾಹನದ ಸ್ಥಿತಿಗತಿ ಪರಿಶೀಲಿಸಿ ಕಛೇರಿಗೆ ದಿ:9.8.2005 ರಂದು ಸಲ್ಲಿಸಿದ ವರದಿಯಲ್ಲಿ ಈ ವಾಹನದ ನೊಂದಣಿ ರದ್ದುಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ಅದರಂತೆ ನೊಂದಣಿ ರದ್ದುಪಡಿಸಲು ಈ ಕೆಳಗಿನಂತೆ ಆದೇಶ ಮಾಡಿದೆ.

### ಆದೇಶ ಸಂ: ಪ್ರಾಸಾಅ:ಚಿಮ:ಎಫ್‌ಟಿ:ಸಾರಿಗೆ:05-06, ದಿನಾಂಕ: 16ನೇ ಡಿಸೆಂಬರ್ 2005

ಕೇಂದ್ರ ಮೋಟಾರು ವಾಹನ ಕಾಯಿದೆ, 1988ರ ಕಲಂ 55ರಲ್ಲಿ ದತ್ತವಾದ ಅಧಿಕಾರದ ಮೇರೆಗೆ ಶ್ರೀ ಆರ್. ರಾಜಶೇಖರ್, ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೊಂದಣಿ ಪ್ರಾಧಿಕಾರ, ಚಿಕ್ಕಮಗಳೂರು ಆದ ನಾನು, ವಾಹನ ಸಂ: ಕೆಎ-14:5106 (ಹೆಚ್‌ಪಿವಿ) ಸ್ವೇ:ಕ್ಯಾ ವಾಹನದ ನೊಂದಣಿ ಹಾಗೂ ನೊಂದಣಿ ಪತ್ರವನ್ನು ಸದರಿ ವಾಹನದ ಮೇಲೆ ಮುಂದೆ ಲೆಕ್ಕ ಪರಿಶೋಧನೆಯಿಂದ ಬರಬೇಕಾದ ಬಾಕಿ ಏನಾದರೂ ಕಂಡುಬಂದಲ್ಲಿ ವಾಹನದ ಮಾಲೀಕರು ಪಾವತಿಸಲು ಬದ್ಧರಿರುತ್ತಾರೆಂಬ ಷರತ್ತಿನ ಮೇಲೆ ನೊಂದಣಿಯನ್ನು ರದ್ದುಪಡಿಸಿರುತ್ತೇನೆ.

### ವಾಹನದ ವಿವರಗಳು

| | | | |
|---|---|---|---|
| 1. | ವಾಹನ ಸಂ | : | ಕೆಎ-14:5106 |
| 2. | ವರ್ಗ | : | ಟಾಟಾ ಹೆಚ್‌ಪಿವಿ (ಸ್ವೇ:ಕ್ಯಾ) |
| 3. | ಮಾಡೆಲ್ | : | 1995 |
| 4. | ತಯಾರಿಕೆ | : | |
| 5. | ಚಾಸಿಸ್ ಸಂ | : | 359350 ಎಂವಿಕ್ಯೂ 12534 |

6. ಯಂತ್ರ ಸಂ : 693 ಡಿ 28 ಎಂ ವಿ ಕ್ಯೂ 135154
7. ತೆರಿಗೆ ಪಾವತಿ : 31.8.2000
8. ಹೆಚ್.ಪಿ.ಎ : ಇರುವುದಿಲ್ಲ
9. ನೊಂದಣಿ ದಿ : 1.6.2005
10. ಎಸ್ ಆರ್ ಸಂ : --------
11. ಮಾಲೀಕರು : ಶ್ರೀ ಕೆ.ಟಿ. ಸುರೇಶ್ ಬಿನ್ ತಿಮ್ಮಯ್ಯ, ಮಹಾಬಲೇಶ್ವರ ಮೋಟಾರ್ ಸರ್ವೀಸ್, ಐ.ಜಿ. ರಸ್ತೆ, ಚಿಕ್ಕಮಗಳೂರು

**ಆರ್. ರಾಜಶೇಖರ್**
ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೊಂದಣಿ ಪ್ರಾಧಿಕಾರ, ಚಿಕ್ಕಮಗಳೂರು.

ಪಿ.ಆರ್. 68

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾವೇರಿ ಜಿಲ್ಲೆ, ಹಾವೇರಿ**
**ಪ್ರಕರಣ ಸಂಖ್ಯೆ: ಡಬ್ಲ್ಯ್ಯು.ಸಿ.ಎ:ಎಫ್-120/05/550, ದಿನಾಂಕ: 30ನೇ ನವೆಂಬರ್ 2005**

**ಅರ್ಜಿದಾರರು:**
1. ಶಿವಪ್ಪ ದುರಗಪ್ಪ ಹುಲ್ಲಣ್ಣನವರ R/o ಗುಡಗೂರ
2. Smt. ಹುಲಗೆವ್ವ W/o ಶಿವಪ್ಪ ಹುಲ್ಲಣ್ಣನವರ.

ವಿರುದ್ಧ

**ಪ್ರತಿವಾದಿಗಳು:**
1. ಶ್ರೀ ಖಂಡಪ್ಪ S/o ಹನುಮಪ್ಪ ಮೈದೂರ ಲಾರಿ ಮಾಲೀಕರು R/o ಗುಡಗೂರ
2. National Ins Co., Ltd. ಹುಬ್ಬಳ್ಳಿ

**ಪ್ರಕಟಣೆ**

ಶ್ರೀ:ಶ್ರೀಮತಿ ಶಿವಪ್ಪ ದುರಗಪ್ಪ ಹುಲ್ಲಣ್ಣನವರ ಶ್ರೀಮತಿ ಹುಲಗವ್ವ @ ಗಂಗವ್ವ W/o ಶಿವಪ್ಪ ಹುಲ್ಲಣ್ಣನವರ ಇವರುಗಳಾದ ತಾವು ಮೃತ ಜಗದೀಶ್ ಇವರ ತಂದೆ ಮತ್ತು ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಜಗದೀಶ್ ಇವರು ಒಂದನೇ ಪ್ರತಿವಾದಿಗಳಾದ ಶ್ರೀ ಖಂಡಪ್ಪ ಹನುಮಪ್ಪ ಮೈದೂರ ಇವರ ಲಾರಿಯಲ್ಲಿ ಚಾಲಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂದವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಯನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಎಸ್. ವಿಜಯಕುಮಾರ್**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾವೇರಿ ಜಿಲ್ಲೆ, ಹಾವೇರಿ.

ಪಿ.ಆರ್. 69

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾವೇರಿ ಜಿಲ್ಲೆ, ಹಾವೇರಿ**
**ಪ್ರಕರಣ ಸಂಖ್ಯೆ: ಡಬ್ಲ್ಯ್ಯು.ಸಿ.ಎ:ಎಫ್-114/05/55, ದಿನಾಂಕ: 30ನೇ ನವೆಂಬರ್ 2005**

**ಅರ್ಜಿದಾರರು:**
1. ಶಿವಮೂರ್ತಯ್ಯ S/o ಗದಿಗೆಯ್ಯ ಕೊಪ್ಪದ R/o ಗೊಂಡಿಹಳ್ಳಿ
2. Smt. ಸುಂದ್ರವ್ವ W/o ಶಿವಮೂರ್ತಯ್ಯ ಕೊಪ್ಪದ

ವಿರುದ್ಧ

**ಪ್ರತಿವಾದಿಗಳು:**
1. ಶ್ರೀ ಮಲ್ಲೇಶ @ ಮಲ್ಲೇಶಪ್ಪ ಬಿ. ಹಳ್ಳದ Owner of T.T. Unit, ಗೊಂಡಿಹಳ್ಳಿ
2. New India Assurance Co. Ltd., ದಾವಣಗೆರೆ.

**ಪ್ರಕಟಣೆ**

ಶ್ರೀ:ಶ್ರೀಮತಿ ಶಿವಮೂರ್ತಯ್ಯ S/o ಗದಿಗೆಯ್ಯ ಕೊಪ್ಪದ, (2) Smt. ಸುಂದ್ರವ್ವ W/o ಶಿವಮೂರ್ತಯ್ಯ, ಇವರುಗಳಾದ ತಾವು ಮೃತ ಪ್ರಭಯ್ಯ ಶಿವಮೂರ್ತಯ್ಯ ಕೊಪ್ಪದ ಇವರ ತಂದೆ ಮತ್ತು ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಪ್ರಭಯ್ಯ ಇವರು ಒಂದನೇ ಪ್ರತಿವಾದಿಗಳಾದ ಶ್ರೀ ಮಲ್ಲೇಶಿ ಹಳ್ಳದ ಇವರ T.T. Unit ರಲ್ಲಿ ಹಮಾಲ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂದವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಯನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಎಸ್. ವಿಜಯಕುಮಾರ್**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾವೇರಿ ಜಿಲ್ಲೆ, ಹಾವೇರಿ.

ಪಿ.ಆರ್. 70

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**
**ಪ್ರ.ಸಂ.ಕಾಅಿದಾ:ಕಾನಪ:ಸಿಆರ್-294/05, ದಿನಾಂಕ: 11ನೇ ನವೆಂಬರ್ 2005**

**ಅರ್ಜಿದಾರರು:**
1. ನಿರ್ಮಲ ಕೋಂ ಬಸವರಾಜಪ್ಪ
2. ಮಲ್ಲಮ್ಮ ಕೋಂ ನಾರಾಯಣಪ್ಪ
**ವಾಸ:** ಚಿಕ್ಕ ಮೇಗಳಗೆರೆ ಗ್ರಾಮ, ಹರಪನಹಳ್ಳಿ ತಾಲ್ಲೂಕು ದಾವಣಗೆರೆ ಜಿಲ್ಲೆ.

ವಿರುದ್ಧ

**ಪ್ರತಿವಾದಿಗಳು:**
1. ವಿಜಯಕುಮಾರ್ ಬಿನ್ ಮರಿಗೌಡ
ಲಾರಿ ಮಾಲೀಕರು, ನಂ.ಕೆ.ಎ.25 25/4390,
ವಾಸ: ಕಟ್ಟಿಗಾಯನಕಟ್ಟೆಗ್ರಾಮ ಕೂಡ್ಲಿಗಿ ತಾಲ್ಲೂಕು,
ಬಳ್ಳಾರಿ ಜಿಲ್ಲೆ.
2. ವ್ಯವಸ್ಥಾಪಕರು, ನ್ಯಾಷನಲ್ ಇನ್ಶೂರೆನ್ಸ್ ಕಂ. ಲಿ.,
ಬಿನ್ನಿ ಕಂಪನಿ ರಸ್ತೆ, ದಾವಣಗೆರೆ.

**ಪ್ರಕಟಣೆ**

ಶ್ರೀ:ಶ್ರೀಮತಿ ನಿರ್ಮಲ ಮತ್ತು ಮಲ್ಲಮ್ಮ ಇವರುಗಳಾದ ತಾವು ಮೃತ ಬಸವರಾಜಪ್ಪ ಇವರ ಹೆಂಡತಿ ಮತ್ತು ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಬಸವರಾಜಪ್ಪ ರವರು ಒಂದನೇ ಪ್ರತಿವಾದಿಗಳಾದ ವಿಜಯಕುಮಾರ ಇವರ ಲಾರಿಯಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಪಿ.ಆರ್. 71 ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು,
ಕಾರ್ಮಿಕ ನಷ್ಟ ಪರಿಹಾರ ದಾವಣಗೆರೆ ಜಿಲ್ಲೆ, ದಾವಣಗೆರೆ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**
**ಪ್ರ.ಸಂ.ಕಾಅದಾ:ಕಾನಪ:ಸಿಆರ್-313/05, ದಿನಾಂಕ: 6ನೇ ಡಿಸೆಂಬರ್ 2005**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

1. ಜಿ. ಕಮಲ ನಾಯ್ಕ ಬಿನ್ ಗೋಪಾಲ ನಾಯ್ಕ ಹಾಗೂ ಇತರ 5 ಜನರು ಎಲ್ಲರವಾಸ: ಸಿದ್ದೇಶ್ವರ ಬಡಾವಣೆ ದಗ್ಗಿನಕಟ್ಟೆ ಪೋಸ್ಟ್, ಬಸವಪಟ್ಟಣ ಹೋಬಳಿ, ಚನ್ನಗಿರಿ ತಾಲ್ಲೂಕು ದಾವಣಗೆರೆ ಜಿಲ್ಲೆ.

ಪ್ರತಿವಾದಿಗಳು:

1. ವೆಂಕಟರಮಣ ಬಿನ್ ವೆಂಕಟೇಶ್ವರರಾವ್ ವೆಂಕಟೇಶ್ವರ ಫ್ಯಾಬ್ರಿಕೇಟರ್ಸ್, ದಾವಣಗೆರೆ ಷುಗರ್ ಕಂ. ಲಿ., ಕುಕ್ಕವಾಡ ಗ್ರಾಮ ದಾವಣಗೆರೆ.
2. ದಿ ಮ್ಯಾನೇಜರ್, ಯುನೈಟೆಡ್ ಇಂಡಿಯಾ ಇನ್ಶೂರೆನ್ಸ್ ಕಂ.ಲಿ., ಮಲ್ಲಿಕಾರ್ಜುನ ಕಾಂಪ್ಲೆಕ್ಸ್, ದಾವಣಗೆರೆ.

**ಪ್ರಕಟಣೆ**

ಶ್ರೀ:ಶ್ರೀಮತಿ ತಂದೆ ತಾಯಿ ತಮ್ಮ ಹಾಗೂ ತಂಗಿಯರು ಇವರುಗಳಾದ ತಾವು ಮೃತ ರವಿಕುಮಾರ್ ಇವರ ತಂದೆ ಮತ್ತು ತಾಯಿ ಮತ್ತಿತರರು ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ರವಿಕುಮಾರ್ ರವರು ಒಂದನೇ ಪ್ರತಿವಾದಿಗಳಾದ ವೆಂಕಟರಮಣ ಇವರ ಷುಗರ್ ಕಂಪನಿಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಪಿ.ಆರ್. 72 ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು,
ಕಾರ್ಮಿಕ ನಷ್ಟ ಪರಿಹಾರ ದಾವಣಗೆರೆ ಜಿಲ್ಲೆ, ದಾವಣಗೆರೆ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**
**ಪ್ರ.ಸಂ.ಕಾಅದಾ:ಕಾನಪ:ಸಿಆರ್-319/05, ದಿನಾಂಕ: 23ನೇ ಡಿಸೆಂಬರ್ 2005**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

1. ಶ್ರೀಮತಿ ಕೆಂಚಮ್ಮ ಕೋಂ ನಾಗಪ್ಪ ಕ್ಯಾರೆಕಟ್ಟೆ ವಾಸ: ಅಸಗೋಡು ಗ್ರಾಮ ಜಗಳೂರು ತಾಲ್ಲೂಕು.

ಪ್ರತಿವಾದಿಗಳು:

1. ಆರ್. ಬಸವರಾಜ್ ಬಿನ್ ಬಿ.ಡಿ. ರೇವಣ್ಣ ಟ್ರ್ಯಾಕ್ಟರ್ ನಂ.ಕೆ.ಎ. 17/T-6285-6286 ಹನುಮಂತ ಪುರ, ಜಗಳೂರು ತಾಲ್ಲೂಕು.
2. ದಿ ಜನರಲ್ ಮ್ಯಾನೇಜರ್, ದಿ ನ್ಯಾಷನಲ್ ಇನ್ಶೂರೆನ್ಸ್ ಕಂ. ಲಿ., ಬಿನ್ನಿ ಕಂಪನಿ ರೋಡ್, ದಾವಣಗೆರೆ.

**ಪ್ರಕಟಣೆ**

ಶ್ರೀಮತಿ ಕೆಂಚಮ್ಮ ಕೋಂ ನಾಗಪ್ಪ ಕ್ಯಾರೆಕಟ್ಟೆ ಇವರುಗಳಾದ ತಾವು ಮೃತ ಬಸವರಾಜು ಇವರ ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಬಸವರಾಜು ರವರು ಒಂದನೇ ಪ್ರತಿವಾದಿಗಳಾದ ಆರ್. ಬಸವರಾಜ್ ಇವರ ಲಾರಿಯಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಪಿ.ಆರ್. 73 ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು,
ಕಾರ್ಮಿಕ ನಷ್ಟ ಪರಿಹಾರ ದಾವಣಗೆರೆ ಜಿಲ್ಲೆ, ದಾವಣಗೆರೆ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**
**ಪ್ರ.ಸಂ.ಕಾಅದಾ:ಕಾನಪ:ಸಿಆರ್-320/05, ದಿನಾಂಕ: 23ನೇ ಡಿಸೆಂಬರ್ 2005**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

1. ಹನುಮಕ್ಕ ಕೋಂ ಹನುಮಂತಪ್ಪ ಮತ್ತಿತರೆ ಇಬ್ಬರು ವಾಸ: ಜೆ.ಸಿ.ಆರ್. ಬಡಾವಣೆ, ಜಗಳೂರು ಟೌನ್.

ಪ್ರತಿವಾದಿಗಳು:
1. ಕೆ. ಮೆಹಬೂಬ್ ಬಿನ್ ಕೆ. ಅಮೀನುದ್ದೀನ್, ಲಾರಿ ಮಾಲೀಕರು ನಂ. ಎಪಿ 02/ಯು.1422 ಗುಡಿಕೋಟೆ ಗ್ರಾಮ ಕೂಡ್ಲಿಗಿ ತಾಲ್ಲೂಕು ಬಳ್ಳಾರಿ ಜಿಲ್ಲೆ.
2. ಬಿ. ಮಲ್ಲಿಕಾರ್ಜುನ ಬಿನ್ ಲೇ|| ಬಿ. ಗೋವಿಂದಪ್ಪ ಪಾಲಿಸಿ ಓಲ್ಡರ್ 10/476/3 ಪ್ರಶಾಂತಿನಗರ, ತಾಡಪತ್ರಿ ಆಂಧ್ರಪ್ರದೇಶ.
3. ದಿ ಬ್ರ್ಯಾಂಚ್ ಮ್ಯಾನೇಜರ್, ಓರಿಯಂಟಲ್ ಇನ್ಶೂರೆನ್ಸ್ ಕಂ.ಲಿ., ಕಲ್ಪನ ಕಾಂಪ್ಲೆಕ್ಸ್, ಪಿ.ಬಿ. ನಂ.7, ಅನಂತಪುರ, ಆಂಧ್ರಪ್ರದೇಶ.

**ಪ್ರಕಟಣೆ**

ಶ್ರೀ:ಶ್ರೀಮತಿ ಹನುಮಕ್ಕ (ತಾಯಿ) ಅಂಜಿನಮ್ಮ (ಹೆಂಡತಿ) ಕರಿಬಸಮ್ಮ (ಮಗಳು) ಇವರುಗಳಾದ ತಾವು ಮೃತ ದುರ್ಗೇಶ್ ಇವರ ತಾಯಿ ಮತ್ತು ಹೆಂಡತಿ, ಮಗಳು ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ದುರ್ಗೇಶ್ ರವರು ಒಂದನೇ ಪ್ರತಿವಾದಿಗಳಾದ ಕೆ. ಮೆಹಬೂಬ್ ಬಿನ್ ಕೆ. ಅಮೀನುದ್ದೀನ್ ಇವರ ಲಾರಿಯಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು,
ಕಾರ್ಮಿಕ ನಷ್ಟ ಪರಿಹಾರ ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್. 74

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**
**ಪ್ರ.ಸಂ.ಕಾಅದಾ:ಕಾನಪ:ಸಿಆರ್-329/05, ದಿನಾಂಕ: 31ನೇ ಡಿಸೆಂಬರ್ 2005**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು:**

1. ಪುಟ್ಟಪ್ಪ ಬಿನ್ ದುಗ್ಗಪ್ಪ
2. ಶಾರದಮ್ಮ ಕೋಂ ಪುಟ್ಟಪ್ಪ
   ವಾಸ: 3ನೇ ಮೈನ್ 10ನೇ ಕ್ರಾಸ್, ವಿನೋಬನಗರ, ದಾವಣಗೆರೆ.

ಪ್ರತಿವಾದಿಗಳು:
1. ರಾಮನಾಯಕ್ ಬಿನ್ ಹಿರ್‍ಯಾನಾಯಕ್, ಟೆಂಪೋ ಮಾಲೀಕರು, ನಂ. ಕೆ.ಎ-17/A-738, 6ನೇ ಕ್ರಾಸ್, ಪಿ. ಬಸವನಗೌಡ ಬಡಾವಣೆ, ಆವರಗೆರೆ ಗ್ರಾಮ, ದಾವಣಗೆರೆ ತಾಲ್ಲೂಕು.
2. ದಿ ಮ್ಯಾನೇಜರ್, ನ್ಯಾಷನಲ್ ಇನ್ಶೂರೆನ್ಸ್ ಕಂ. ಲಿ., ಚಾಮರಾಜಪೇಟೆ, ದಾವಣಗೆರೆ

**ಪ್ರಕಟಣೆ**

ಶ್ರೀ:ಶ್ರೀಮತಿ ಪುಟ್ಟಪ್ಪ (ತಂದೆ) ಶಾರದಮ್ಮ (ತಾಯಿ) ಇವರುಗಳಾದ ತಾವು ಮೃತ ಪಿ. ರಾಘವೇಂದ್ರ ಇವರ ತಂದೆ ಮತ್ತು ತಾಯಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಪಿ. ರಾಘವೇಂದ್ರ ರವರು ಒಂದನೇ ಪ್ರತಿವಾದಿಗಳಾದ ರಾಮನಾಯಕ್ ಇವರ ಟೆಂಪೋ ರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು,
ಕಾರ್ಮಿಕ ನಷ್ಟ ಪರಿಹಾರ ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್. 75

**FORM NO. 151**
**[See Rule 315]**
**Companies Act 1956**
**Member's Voluntory Winding-up**
**Notice by Liquidator of his appointment in Official Gazette Under Section 516 and rule 315**

| | | |
|---|---|---|
| Name of the company | : | EMS Consulting Engineers (India) Private Limited |
| Date of Incorporation of the Company | : | 26.4.1991 |
| Nature of Business | : | Engineering Consultancy Services |
| Address of Registered Office | : | No. 48, Lavelle Road, Bangalore - 560 001 |
| Name and Address of Liquidator | : | K.P. Rao & Co. Chartered Accountants 'POORNIMA' 25, State Bank Road, Bangalore - 560 001 |
| Date of Appointment | : | January 21, 2006 |
| BY whom appointment | : | Members |

**K. VISWANATH**
Partner K.P. RAO & CO.
Chartered Accountants LIQUIDATORS

P.D. 25

## ಜಿಲ್ಲಾ ಹಿಂದುಳಿದ ವರ್ಗಗಳ ಹಾಗೂ ಅಲ್ಪ ಸಂಖ್ಯಾತರ ಅಧಿಕಾರಿಗಳವರ ಕಛೇರಿ, ಬೆಳಗಾವಿ

### ಪತ್ರಿಕಾ ಪ್ರಕಟಣೆ

**ಸಂಖ್ಯೆ: ಬಿಸಿಎಂ:4: ಕಾಪತ: ಸಿಆರ್:43:2005-06, ದಿನಾಂಕ: 31ನೇ ಜನವರಿ, 2006**

**ವಿಷಯ :** 2005-06ನೇ ಸಾಲಿನಲ್ಲಿ ಹಿಂದುಳಿದ ವರ್ಗಗಳ ಕಾನೂನು ಪದವೀಧರರಿಗೆ ತರಬೇತಿ ನೀಡುವ ಕುರಿತು.

ಪ್ರಸಕ್ತ 2005-06ನೇ ಸಾಲಿನಿಂದ ಬೆಳಗಾವಿ ಜಿಲ್ಲೆಯಲ್ಲಿನ 8 (ಎಂಟು) ಹಿಂದುಳಿದ ವರ್ಗಗಳ ಕಾನೂನು ಪದವೀಧರರಿಗೆ ಈ ಇಲಾಖೆಯಿಂದ ತರಬೇತಿ ನೀಡುವ ಕಾರ್ಯಕ್ರಮವಿದ್ದು ಆಸಕ್ತ ಹಾಗೂ ಅರ್ಹ ಹಿಂದುಳಿದ ವರ್ಗಗಳಿಗೆ ಸೇರಿದ ಕಾನೂನು ಪದವೀಧರರು ಈ ಕೆಳಕಂಡ ನಿಬಂದನೆಗಳಿಗೆ ಒಳಪಟ್ಟು ಅರ್ಜಿಗಳನ್ನು ಜಿಲ್ಲಾ ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಅಧಿಕಾರಿಗಳು, ಬೆಳಗಾವಿ ಇವರಿಗೆ ದಿನಾಂಕ: 23.02.2006ರೊಳಗಾಗಿ ಸಲ್ಲಿಸಬಹುದಾಗಿದೆ.

**ಅರ್ಹತೆ ನಿಯಮಗಳು ಹಾಗೂ ತರಬೇತಿಯ ವಿವರಗಳು**

1. ತರಬೇತಿಯನ್ನು ಬೆಳಗಾವಿ ಜಿಲ್ಲೆಯಲ್ಲಿಯೇ ನೀಡಲಾಗುವುದು.
2. ಬೆಳಗಾವಿ ಜಿಲ್ಲೆಯಿಂದ ಒಟ್ಟು ಎಂಟು (8) ಅಭ್ಯರ್ಥಿಗಳು ಮಾತ್ರ ತರಬೇತಿಗೆ ಆಯ್ಕೆ ಮಾಡಲಾಗುವುದು. (ಪ್ರವರ್ಗ-2ಎ), ದಿಂದ 5 ಜನ, ಪ್ರವರ್ಗ-3ಎ, ದಿಂದ ಒಬ್ಬರಿಗೆ ಹಾಗೂ ಪ್ರವರ್ಗ-3ಬಿ, ದಿಂದ 2 ಜನ ಒಟ್ಟು 8).
3. ಸರ್ಕಾರದ ಆದೇಶ ಸಂಖ್ಯೆ: ಎನ್‌ಡಬ್ಲ್ಯೂಡಿ: 150 ಬಿಸಿಎಂ:94 ದಿನಾಂಕ: 17.09.1994ರಲ್ಲಿ ವರ್ಗೀಕರಣ ಮಾಡಿರುವ ಪ್ರಕಾರ ವರ್ಗ-2ಎ, 3ಎ, 3ಬಿ ಸೇರಿದ ಅಭ್ಯರ್ಥಿಗಳಾಗಿರಬೇಕು. ಮತ್ತು ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಡಿ:222: ಬಿಸಿಎ:91 ದಿನಾಂಕ: 26.09.1994ರ ಆದೇಶದಲ್ಲಿ ಸರ್ಕಾರವು ನಿಗದಿಪಡಿಸಿರುವ ನಮೂನೆಗಳಲ್ಲಿ ಜಾತಿ: ಆದಾಯದ ಬಗ್ಗೆ ತಹಶೀಲ್ದಾರರಿಂದ ಪಡೆದ ಪ್ರಮಾಣ ಪತ್ರವನ್ನು ಸಲ್ಲಿಸಬೇಕು. (ವಾರ್ಷಿಕ ಆದಾಯ ರೂ.15000-00 ಮೀರಬಾರದು).
4. ಬೆಳಗಾವಿ ಜಿಲ್ಲೆಯಲ್ಲಿ ವಾಸಮಾಡುತ್ತಿರುವ ಅಭ್ಯರ್ಥಿಗಳು ಹಾಗೂ ಪ್ರವರ್ಗ-2ಎ, ಪ್ರವರ್ಗ-3ಎ, ಪ್ರವರ್ಗ-3ಬಿ, ವರ್ಗಕ್ಕೆ ಸೇರಿದವರು ಮಾತ್ರ ಅರ್ಜಿ ಹಾಕಲು ಅರ್ಹರಾಗಿರುತ್ತಾರೆ.
5. ತರಬೇತಿ ಅವಧಿಯು ನಾಲ್ಕು (4) ವರ್ಷವಾಗಿದ್ದು ತರಬೇತಿಗೆ ಆಯ್ಕೆಯಾದ ಅಭ್ಯರ್ಥಿಗಳಿಗೆ ತರಬೇತಿ ಅವಧಿಯಲ್ಲಿ ಪ್ರತಿ ಮಾಹೆ ರೂ.1000-00 (ರೂ. ಒಂದು ಸಾವಿರ ಮಾತ್ರ) ತರಬೇತಿ ಭತ್ಯೆ (ಸ್ಟೈಪಂಡ್) ಮಂಜೂರು ಮಾಡಲಾಗುವುದು.
6. ಅಭ್ಯರ್ಥಿಗಳನ್ನು ಜಿಲ್ಲಾ ಮಟ್ಟದ ಆಯ್ಕೆ ಸಮಿತಿಯಿಂದ ಸಂದರ್ಶನ ನಡೆಸಿ ಆಯ್ಕೆ ಮಾಡಲಾಗುವುದು.
7. ಅಭ್ಯರ್ಥಿಗಳು ಅರ್ಜಿ ಜೊತೆಗೆ ವಯಸ್ಸನ್ನು ದೃಢೀಕರಿಸುವ ಎಸ್.ಎಸ್.ಎಲ್.ಸಿ.ಯ ಅಂಕಪಟ್ಟಿ ಪದವಿ ಹಾಗೂ ಕಾನೂನು ಪದವಿಯಲ್ಲಿ ಪಡೆದ ಅಂಕಪಟ್ಟಿಗಳ ಪ್ರಮಾಣ ಪತ್ರದ ದೃಢೀಕೃತ ಪತ್ರವನ್ನು ಮತ್ತು ವಕೀಲರು ಎಂದು ಪ್ರಾಕ್ಟೀಸ್ ಮಾಡುತ್ತಿರುವ ಬಗ್ಗೆ ಪ್ರಮಾಣ ಪತ್ರಗಳನ್ನು ಲಗತ್ತಿಸತಕ್ಕದ್ದು.
8. ಅಭ್ಯರ್ಥಿಗಳ ವಯಸ್ಸು ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕಕ್ಕೆ 30 ವರ್ಷಗಳು ಮೀರಿರಬಾರದು.
9. ಆಯ್ಕೆಯಾದ ಅಭ್ಯರ್ಥಿಗಳು ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್: ಸರ್ಕಾರಿ ವಕೀಲರು ಅಥವಾ ಕನಿಷ್ಟ 20 ವರ್ಷಗಳ ವಕೀಲ ವೃತ್ತಿಯಲ್ಲಿ ಅನುಭವವುಳ್ಳ ಯಾವುದೇ ವಕೀಲರ ಅಧೀನದಲ್ಲಿ ತರಬೇತಿಗೆ ನಿಯೋಜಿಸಲಾಗುವುದು.
10. ಅಭ್ಯರ್ಥಿಯು ಬಾರ್ ಕೌನ್ಸಿಲ್‌ನಲ್ಲಿ ತಮ್ಮ ಹೆಸರನ್ನು ನೊಂದಾಯಿಸಿರಬೇಕು. ನೊಂದಣಿಯಾಗಿದ್ದಲ್ಲಿ ತರಬೇತಿಗೆ ಆಯ್ಕೆಯಾದರೆ ಅಂತಹ ಅಭ್ಯರ್ಥಿಯು ಬಾರ್ ಕೌನ್ಸಿಲ್‌ನಲ್ಲಿ ತಮ್ಮ ನೊಂದಾಣಿ ಮಾಡಿಸಿದ ಹೊರತು ಸ್ಟೈಪಂಡ್ ಹಣವನ್ನು ಪಾವತಿಸಲಾಗುವುದು.
11. ಅಭ್ಯರ್ಥಿಯು ತರಬೇತಿಗೆ ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದಿಂದ ಎರಡು (2) ವರ್ಷದೊಳಗಾಗಿ ಕಾನೂನು ಪದವಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.
12. ತರಬೇತಿಯ ಅವಧಿಯು (4) ನಾಲ್ಕು ವರ್ಷಗಳಾಗಿದ್ದು, ತರಬೇತಿಯನ್ನು ಮಧ್ಯದಲ್ಲಿ ಬಿಡಕೂಡದು. ತರಬೇತಿಯ ಅವಧಿಯಲ್ಲಿ ರಾಜ್ಯ ಅಥವಾ ಕೇಂದ್ರ ಸರ್ಕಾರದ ಸೇವೆಗೆ ಸೇರಿದಲ್ಲಿ ಈ ಷರತ್ತು ಅನ್ವಯಿಸುವುದಿಲ್ಲ.
13. ಅಭ್ಯರ್ಥಿಗಳು ಸುಳ್ಳು ಮಾಹಿತಿ ಸಲ್ಲಿಸಿದಲ್ಲಿ ಅವರ ವಿರುದ್ಧ ಕಾನೂನಿನ ಪ್ರಕಾರ ಕ್ರಮ ಜರುಗಿಸಲಾಗುವುದು. ಅಲ್ಲದೆ ಅವರಿಗೆ ನೀಡಲಾದ ತರಬೇತಿ ಭತ್ಯೆಯನ್ನು ಶೇ.10 ರಷ್ಟು ಬಡ್ಡಿಯೊಂದಿಗೆ ವಸೂಲಿ ಮಾಡಲಾಗುವುದು. ಯಾವುದೇ ಹಣ ಬಾಕಿ ಉಳಿದಲ್ಲಿ ಭೂ, ಕಂದಾಯ ಬಾಕಿ ವಸೂಲಿ ಮಾಡುವ ರೀತಿಯಲ್ಲಿ ಇಂತಹ ಹಣವನ್ನು ವಸೂಲಿ ಮಾಡಲಾಗುವುದು.
14. ಸದಸ್ಯ ಕಾರ್ಯದರ್ಶಿಯವರು ಸ್ವೀಕರಿಸಿದ ಅರ್ಜಿಗಳನ್ನು ಪರಿಶೀಲನೆ ಮಾಡಿ ಅಪೂರ್ಣಗೊಂಡಿರುವ ಹಾಗೂ ಕೇಳಿರುವ ಮಾಹಿತಿಯನ್ನು ಅರ್ಜಿಯ ಸಂಗಡ ಒದಗಿಸದ ಮತ್ತು ಅವಧಿ ಮೀರಿ ಬಂದಂತಹ ಅರ್ಜಿಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕೃತ ಮಾಡಲಾಗುವುದು.
ಅರ್ಜಿ ಮತ್ತು ಆಸಕ್ತಿಯುಳ್ಳವರು, ಈ ಪ್ರಕಟಣೆಯೊಂದಿಗೆ ಪ್ರಕಟಿಸಲಾದ ಅರ್ಜಿ ನಮೂನೆಯಲ್ಲಿಯೇ ದಿನಾಂಕ: 22.02.2006ರೊಳಗಾಗಿ ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಇಲಾಖೆ, ಬೆಳಗಾವಿ ಇವರಿಗೆ ತಲುಪುವಂತೆ ಕಳುಹಿಸಬೇಕು. ಹೆಚ್ಚಿನ ಮಾಹಿತಿಗಾಗಿ ಮತ್ತು ಅರ್ಜಿ ನಮೂನೆಗಳಿಗೆ ಜಿಲ್ಲಾ ಹಿಂದುಳಿದ ವರ್ಗಗಳು ಹಾಗೂ ಅಲ್ಪ ಸಂಖ್ಯಾತರ ಅಧಿಕಾರಿಗಳವರ ಕಛೇರಿ ಡಿ.ಸಿ. ಕಾಂಪೌಂಡ್ ಬೆಳಗಾವಿ ಇವರನ್ನು ಕಛೇರಿಯ ವೇಳೆಯಲ್ಲಿ ಸಂಪರ್ಕಿಸಬಹುದು.

ಸದಸ್ಯ-ಕಾರ್ಯದರ್ಶಿಗಳು ಮತ್ತು ಜಿಲ್ಲಾ ಅಧಿಕಾರಿಗಳು,
ಹಿಂದುಳಿದ ವರ್ಗಗಳ ಮತ್ತು
ಅಲ್ಪಸಂಖ್ಯಾತರ ಇಲಾಖೆ, ಬೆಳಗಾವಿ.

ಪಿ.ಆರ್. 479

## ವಿಶೇಷ ಭೂಸ್ವಾಧೀನಾಧಿಕಾರಿಗಳ ಕಛೇರಿ, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು

**ಅಧಿಸೂಚನೆ ಕ್ರಮಾಂಕ: ಕಗೃಮಂ/ ಭೂಸ್ವಾವಿ/ 13/ 98-99, ದಿನಾಂಕ: 28ನೇ ನವೆಂಬರ್, 2005**

ಭೂಸ್ವಾಧೀನ ಅಧಿನಿಯಮ 1894ರ ಸೆಕ್ಷನ್ 16(2) ರನ್ವಯ ಕ್ರಮಸಂಖ್ಯೆ: ಕಗೃಮಂ/ ಭೂಸ್ವಾವಿ/ 13/ 98-99 ರಾಜ್ಯ ಸರ್ಕಾರದ ಕರ್ನಾಟಕ ಅಧಿನಿಯಮ 17/1961ರಲ್ಲಿ ತಿದ್ದುಪಡಿಯಾದಂತೆ ಭೂಸ್ವಾಧೀನ ಅಧಿನಿಯಮ 1894ರ ಅನ್ವಯ ಕಲಂ 16ರ ಪ್ರಕರಣ (2) ಉಪಪ್ರಕರಣ ಮೇರೆಗೆ ಈ

ಮುಂದಿನ ಅನುಸೂಚಿಯಲ್ಲಿ ಸೂಚಿಸಲಾದ ಜಮೀನುಗಳನ್ನು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಕರ್ನಾಟಕ ಗೃಹ ಮಂಡಳಿ ಬೆಂಗಳೂರು ವಸತಿ ಯೋಜನೆಯ ಸಲುವಾಗಿ ಅಧಿಕೃತವಾಗಿ ಸದರಿ ಭೂಸ್ವಾಧೀನ ಅಧಿನಿಯಮ ಪ್ರಕರಣ 16(1) ರಂತೆ ವಶಪಡಿಸಿಕೊಳ್ಳಲಾಗಿದೆ ಎಂದು ಈ ಮೂಲಕ ಪ್ರಕಟಿಸಲಾಗಿದೆ.

**ಅನುಸೂಚಿ**

ಜಿಲ್ಲೆ: ಬೆಂಗಳೂರು, ತಾಲ್ಲೂಕು: ಆನೇಕಲ್, ಹೋಬಳಿ: ಅತ್ತಿಬೆಲೆ, ಗ್ರಾಮ: ಬನಹಳ್ಳಿ ಮತ್ತು ಇಗ್ಗಲೂರು

| ಕ್ರ.ಸಂ. | ಸರ್ವೆ ನಂ. | ತರಹೆ | ವಿಸ್ತೀರ್ಣ ಎ-ಗುಂ | ವಶಪಡಿಸಿಕೊಂಡ ದಿನಾಂಕ |
|---|---|---|---|---|
| | | **ಬನಹಳ್ಳಿ** | | |
| 1. | 28/1 ಪೈ | ಖುಷ್ಕಿ | 0-16 | 08.11.2005 |
| 2. | 28/2 ಪೈ | ಖುಷ್ಕಿ | 0-01 | 08.11.2005 |
| 3. | 32/1 ಪೈ | ಖುಷ್ಕಿ | 0-31 | 08.11.2005 |
| 4. | 47/2 | ಖುಷ್ಕಿ | 0-04 | 08.09.2005 |
| | | **ಇಗ್ಗಲೂರು** | | |
| 5. | 3/1 | ಎನ್.ಎ.ಕೆ. | 0-19 | 12.02.2004 |
| 6. | 4 ಪೈ | ಖುಷ್ಕಿ | 1-11 | 12.02.2004 |
| 7. | 1 ಪೈ | ಖುಷ್ಕಿ | 0-10 | 12.02.2004 |

ವಿಶೇಷ ಭೂಸ್ವಾಧೀನಾಧಿಕಾರಿಗಳು
ಕರ್ನಾಟಕ ಗೃಹ ಮಂಡಳಿ, ಬೆಂಗಳೂರು.

## ವಿಶೇಷ ಭೂಸ್ವಾಧೀನಾಧಿಕಾರಿಗಳ ಕಛೇರಿ, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು

## ಅಧಿಸೂಚನೆ ಕ್ರಮಾಂಕ: ಕಗೃಮಂ/ ಭೂಸ್ವಾವಿ/ 2/ 90-91, ದಿನಾಂಕ: 28ನೇ ನವೆಂಬರ್, 2005

ಭೂಸ್ವಾಧೀನ ಅಧಿನಿಯಮ 1894ರ ಸೆಕ್ಷನ್ 16(2) ರನ್ವಯ ಕ್ರಮಸಂಖ್ಯೆ: ಕಗೃಮಂ/ ಭೂಸ್ವಾವಿ/ 2/ 90-91 ರಾಜ್ಯ ಸರ್ಕಾರದ ಕರ್ನಾಟಕ ಅಧಿನಿಯಮ 17/1961ರಲ್ಲಿ ತಿದ್ದುಪಡಿಯಾದಂತೆ ಭೂಸ್ವಾಧೀನ ಅಧಿನಿಯಮ 1894ರ ಅನ್ವಯ ಕಲಂ 16ರ ಪ್ರಕರಣ (2) ಉಪಪ್ರಕರಣ ಮೇರೆಗೆ ಈ ಮುಂದಿನ ಅನುಸೂಚಿಯಲ್ಲಿ ಸೂಚಿಸಲಾದ ಜಮೀನುಗಳನ್ನು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಕರ್ನಾಟಕ ಗೃಹ ಮಂಡಳಿ ಬೆಂಗಳೂರು ವಸತಿ ಯೋಜನೆಯ ಸಲುವಾಗಿ ಅಧಿಕೃತವಾಗಿ ಸದರಿ ಭೂಸ್ವಾಧೀನ ಅಧಿನಿಯಮ ಪ್ರಕರಣ 16(1) ರಂತೆ ವಶಪಡಿಸಿಕೊಳ್ಳಲಾಗಿದೆ ಎಂದು ಈ ಮೂಲಕ ಪ್ರಕಟಿಸಲಾಗಿದೆ.

**ಅನುಸೂಚಿ**

ಜಿಲ್ಲೆ: ಬೆಂಗಳೂರು, ತಾಲ್ಲೂಕು: ಆನೇಕಲ್, ಹೋಬಳಿ: ಅತ್ತಿಬೆಲೆ, ಗ್ರಾಮ: ಬನಹಳ್ಳಿ ಮತ್ತು ಇಗ್ಗಲೂರು

| ಕ್ರ.ಸಂ. | ಸರ್ವೆ ನಂ. | ತರಹೆ | ವಿಸ್ತೀರ್ಣ ಎ-ಗುಂ | ವಶಪಡಿಸಿಕೊಂಡ ದಿನಾಂಕ |
|---|---|---|---|---|
| | | **ಬನಹಳ್ಳಿ** | | |
| 1 | 2 | 3 | 4 | 5 |
| 1. | 16/ 1ಎ | ಖುಷ್ಕಿ | 0-09 | 18.09.1997 |
| 2. | 16/ 1 ಬಿ | ಖುಷ್ಕಿ | 1-01<br>0-01 ಖ | 20.01.1997 |
| 3. | 16/2 | ಖುಷ್ಕಿ | 1-27 | 18.09.1997 |
| 4. | 17 | ಖುಷ್ಕಿ | 1-34<br>0-01 ಖ | 08.01.1997 |
| 5. | 18/1 | ಖುಷ್ಕಿ | 1-35<br>0-02 ಖ | 17.11.1997 |
| 6. | 18/2 | ಖುಷ್ಕಿ | 0-36 | 03.03.1997 |
| 7. | 18/3 | ಖುಷ್ಕಿ | 1-07 | 03.03.1997 |
| 8. | 19 | ಖುಷ್ಕಿ | 1-25<br>0-01 ಖ | 24.03.1997 |
| 9. | 20 | ಖುಷ್ಕಿ | 0-18 | 10.03.1997 |
| 10. | 21/1 | ಖುಷ್ಕಿ | 2-19 | 18.09.1997 |
| 11. | 21/2ಎ | ಖುಷ್ಕಿ | 1-01 | 18.09.1997 |
| 12. | 21/2 ಬಿ | ಖುಷ್ಕಿ | 1-00 | 18.09.1997 |
| 13. | 21/3 | ಖುಷ್ಕಿ | 1-02<br>0-01 ಖ | 24.02.1998 |

| 1 | 2 | 3 | 4 | 5 |
|---|---|---|---|---|
| 14. | 22/1 | ಖುಷ್ಕಿ | 1-23<br>0-05 ಖ | 12.05.1997 |
| 15. | 22/ 2 | ಖುಷ್ಕಿ | 0-34<br>0-03 ಖ | 24.02.1998 |
| 16. | 23/1 | ಖುಷ್ಕಿ | 1-00<br>0-01 ಖ | 23.04.1997 |
| 17. | 23/3 | ಖುಷ್ಕಿ | 0-37 | 18.09.1997 |
| 18. | 23/4 | ಖುಷ್ಕಿ | 0-13<br>0-01 ಖ | 23.04.1997 |
| 19. | 24/1 | ಖುಷ್ಕಿ | 1-23<br>0-02 ಖ | 12.05.1997 |
| 20. | 24/2 | ಖುಷ್ಕಿ | 1-00 | 23.04.1997 |
| 21. | 24/3 | ಖುಷ್ಕಿ | 0-36 | 23.04.1997 |
| 22. | 24/4 | ಖುಷ್ಕಿ | 1-00<br>0-02 ಖ | 18.09.1997 |
| 23. | 24/5 | ಖುಷ್ಕಿ | 0-27 | 14.07.1998 |
| 24. | 26/1ಎ | ಖುಷ್ಕಿ | 0-04<br>0-01 ಖ<br>0-02 | 24.02.1998<br><br>12.09.1997 |
| 25. | 26/1ಬಿ | ಖುಷ್ಕಿ | 0-03<br>0-01ಖ | 12.09.1997 |
| 26. | 26/2 | ಖುಷ್ಕಿ | 0-07 | 18.09.1997 |
| 27. | 26/3 | ಖುಷ್ಕಿ | 0-06 | 20.01.1997 |
| 28. | 28/3 | ಖುಷ್ಕಿ | 0-39 | 09.02.1998 |
| 29. | 28/4 | ಖುಷ್ಕಿ | 1-01 | 17.11.1997 |
| 30. | 29/4 | ಖುಷ್ಕಿ | 0-10 | 26.02.1997 |
| 31. | 30 | ಖುಷ್ಕಿ | 0-05<br>3-33<br>0-03 ಖ | 14.08.1998<br>19.03.1998 |
| 32. | 31/3 (ಪಿ) | ಖುಷ್ಕಿ | 2-20 | 14.07.1997 |
| 33. | 31/4ಎ | ಖುಷ್ಕಿ | 0-07 | 24.02.1998 |
| 34. | 31/4ಬಿ | ಖುಷ್ಕಿ | 0-09 $^{1}/_{2}$<br>0-09 $^{3}/_{4}$<br>0-09 $^{3}/_{4}$ | 28.07.1998<br>28.07.1998<br>14.07.1998 |
| 35. | 31/4ಸಿ | ಖುಷ್ಕಿ | 0-22 | 24.02.1998 |
| 36. | 31/5 | ಖುಷ್ಕಿ | 1-17 | 12.05.1997 |
| 37. | 32/2 | ಖುಷ್ಕಿ | 0-17 | 14.07.1997 |
| 38. | 33 | ಖುಷ್ಕಿ | 6-21 | 27.01.1997 |
| 39. | 35/1ಎ | ಖುಷ್ಕಿ | 0-20 | 14.07.1997 |
| 40. | 35/1ಬಿ | ಖುಷ್ಕಿ | 1-21 | 22.09.1997 |
| 41. | 35/2 | ಖುಷ್ಕಿ | 1-04 | 23.04.1997 |
| 42. | 35/4 | ಖುಷ್ಕಿ | 0-04 $^{1}/_{2}$<br>0-04 $^{1}/_{2}$<br>0-07 $^{1}/_{2}$<br>0-08 $^{1}/_{2}$ | 23.04.1997<br>05.05.1997<br>12.05.1997<br>02.06.1997 |
| 43. | 37/1 | ಖುಷ್ಕಿ | 0-29<br>0-02ಖ | 02.04.1997 |
| 44. | 37/2 | ಖುಷ್ಕಿ | 2-07<br>0-02 ಖ | 27.01.1997 |

| 1 | 2 | 3 | 4 | 5 |
|---|---|---|---|---|
| 45. | 37/3 | ಖುಷ್ಕಿ | 0-11 | 02.04.1997 |
| 46. | 38/1 | ಖುಷ್ಕಿ | 2-21<br>0-03 ಖ | 08.01.1997 |
| 47. | 38/2 | ಖುಷ್ಕಿ | 3-02 | 10.11.1997 |
| 48. | 39/1 | ಖುಷ್ಕಿ | 0-06 | 09.06.1998 |
| 49. | 39/2 | ಖುಷ್ಕಿ | 0-02 | 09.06.1998 |
| 50. | 39/7 | ಖುಷ್ಕಿ | 2-22<br>0-03 ಖ | 23.04.1997 |
| 51. | 40/1 | ಖುಷ್ಕಿ | 2-22<br>0-01 ಖ | 18.09.1997 |
| 52. | 40.2 | ಖುಷ್ಕಿ | 0-35<br>0-02 ಖ | 02.04.1997 |
| 53. | 41/1 | ಖುಷ್ಕಿ | 0-06 | 03.07.1998 |
| 54. | 41/2 | ಖುಷ್ಕಿ | 0-07 | 26.02.1997 |
| 55. | 41/3 | ಖುಷ್ಕಿ | 0-10 | 02.04.1997 |
| 56. | 42/2 | ಖುಷ್ಕಿ | 0-10<br>0-17<br>0-01 ಖ | 26.02.1997<br>26.02.1997 |
| 57. | 42/3 | ಖುಷ್ಕಿ | 0-20<br>0-06 | 03.07.1998<br>02.04.1997 |
| 58. | 108/1 | ಖುಷ್ಕಿ | 0-04 | 02.04.1997 |
| 59. | 108/3 | ಖುಷ್ಕಿ | 0-38 | 27.01.1997 |
| 60. | 108/5 | ಖುಷ್ಕಿ | 0-09 | 27.01.1997 |
| | | ಇಗ್ಗಲೂರು | | |
| 1. | 2ಪಿ | ಖುಷ್ಕಿ | 1-04$^{1}/_{2}$<br>1-04$^{1}/_{2}$<br>0-07 | 17.11.1997<br>09.02.1998 |
| 2. | 6/2 ಎಪಿ | ಖುಷ್ಕಿ | 0-30 | 01.09.1997 |
| 3. | 8/2 | ಖುಷ್ಕಿ | 0-05 | 15.07.1998 |
| 4. | 8/3 | ಖುಷ್ಕಿ | 0-07 | 28.03.1998 |
| 5. | 16/2ಎ | ಖುಷ್ಕಿ | 1-05<br>0-10 ಖ | 24.02.1998 |
| 6. | 16/2ಬಿ | ಖುಷ್ಕಿ | 1-23<br>0-10 ಖ | 11.08.1997 |
| 7. | 17 | ಖುಷ್ಕಿ | 3-29<br>2-07<br>0-20 ಖ | 28.07.1998<br>24.11.1997 |
| 8. | 18 | ಖುಷ್ಕಿ | 6-24<br>0-07 ಖ | 14.08.1998 |
| 9. | 19 | ಖುಷ್ಕಿ | 0-21 | 14.07.1997 |
| 10. | 21/1 | ಖುಷ್ಕಿ | 2-00 | 12.09.1997 |
| 11. | 21/2 | ಖುಷ್ಕಿ | 1-29 | 12.09.1997 |
| 12. | 237 | ಖುಷ್ಕಿ | 5-17<br>0-16 ಖ | 21.07.1997 |
| 13. | 238/ 1 ಪೈ | ಖುಷ್ಕಿ | 1-36<br>0-06 ಖ | 26.02.1997 |
| 14. | 238/2 | ಖುಷ್ಕಿ | 3-15<br>0-08 ಖ | 24.02.1998 |
| 15. | 239/1 | ಖುಷ್ಕಿ | 1-33 | 14.07.1997 |

| 1 | 2 | 3 | 4 | 5 |
|---|---|---|---|---|
| 16. | 239/2 | ಖುಷ್ಕಿ | 1-27<br>0-01 ಖ | 14.07.1997 |
| 17. | 240 | ಖುಷ್ಕಿ | 1-30<br>0-10<br>1-01 | 08.01.1997<br>05.05.1997<br>12.05.1997 |
| 18. | 241/1 | ಖುಷ್ಕಿ | 0-30<br>1-00 | 05.05.1997<br>02.06.1997 |
| 19. | 241/2 | ಖುಷ್ಕಿ | 2-39 | 15.04.1998 |
| 20. | 242/ ಪೈ | ಖುಷ್ಕಿ | 2-06 | 28.07.1998 |
| 21. | 243 | ಖುಷ್ಕಿ | 2-09 | 08.01.1997 |
| 22. | 244 | ಖುಷ್ಕಿ | 0-27$^1/_2$<br>0-28<br>0-14 | 11.08.1997<br>11.08.1997<br>28.07.1998 |
| 23. | 245 | ಖುಷ್ಕಿ | 4-01<br>0-01 ಖ | 22.09.1997 |
| 24. | 246 | ಖುಷ್ಕಿ | 0-13<br>0-06$^1/_2$ | 22.12.1997<br>28.07.1998 |
| 25. | 247/1 | ಖುಷ್ಕಿ | 0-33 | 02.06.1997 |
| 26. | 247/2ಎ | ಖುಷ್ಕಿ | 0-30 | 18.09.199727. |
| 27. | 247/ 2 ಬಿ | ಖುಷ್ಕಿ | 0-27 | 24.02.1998 |
| 28. | 248 | ಖುಷ್ಕಿ | 1-09<br>0-25 | 22.12.1997<br>28.07.1998 |
| 29. | 249/1 | ಖುಷ್ಕಿ | 3-08 | 03.02.1997 |
| 30. | 249/2 | ಖುಷ್ಕಿ | 1-11 | 14.07.1997 |
| 31. | 249/3 ಪೈ | ಖುಷ್ಕಿ | 0-20 | 19.03.1998 |
| 32. | 250 | ಖುಷ್ಕಿ | 5-00<br>0-06 ಖ | 14.07.1997 |
| 33. | 251/1 | ಖುಷ್ಕಿ | 1-24 | 03.03.1997 |
| 34. | 251/2 | ಖುಷ್ಕಿ | 0-29<br>0-01 ಖ | 12.09.1997 |
| 35. | 251/3 | ಖುಷ್ಕಿ | 0-35 | 03.03.1997 |
| 36. | 252 | ಖುಷ್ಕಿ | 7-12 | 14.07.1997 |
| 37. | 253 | ಖುಷ್ಕಿ | 2-21$^1/_4$<br>2-11$^3/_4$<br>0-01 ಖ | 18.09.1997<br>14.07.1997 |
| 38. | 254 | ಖುಷ್ಕಿ | 3-32<br>0-03ಖ | 03.03.1997 |
| 39. | 255/1 | ಖುಷ್ಕಿ | 3-09 | 03.03.1997 |
| 40. | 255/2 | ಖುಷ್ಕಿ | 2-21 | 12.09.1997 |
| 41. | 256/1 | ಖುಷ್ಕಿ | 1-20 | 10.11.1997 |
| 42. | 257/1 | ಖುಷ್ಕಿ | 2-26 | 02.04.1997 |
| 43. | 257/2 | ಖುಷ್ಕಿ | 1-15 | 08.03.1999 |
| 44. | 258 | ಖುಷ್ಕಿ | 2-09<br>0-02 ಎ | 20.01.1997 |
| 45. | 259 | ಖುಷ್ಕಿ | 0-16<br>1-05<br>0-14<br>0-08 | 11.08.1997<br>11.08.1997<br>22.12.1997<br>28.07.1998 |

| 1 | 2 | 3 | 4 | 5 |
|---|---|---|---|---|
| 46. | 260 | ಖುಷ್ಕಿ | 1-16$^{1}/_{2}$<br>1-16$^{1}/_{2}$ | 09.02.1998<br>17.11.1997 |
| 47. | 261 | ಖುಷ್ಕಿ | 2-16 | 02.04.1997 |
| 48. | 262/4 | ಖುಷ್ಕಿ | 0-27 | 18.09.1997 |
| 49. | 262/5 | ಖುಷ್ಕಿ | 0-08 | 02.06.1997 |
| 50. | 264/1 | ಖುಷ್ಕಿ | 2-15<br>0-03 ಖ | 28.03.1998 |
| 51. | 265 | ಖುಷ್ಕಿ | 1-05<br>1-01<br>1-38 | 02.04.1997<br>20.01.1997<br>20.01.1997 |
| 52. | 266 | ಖುಷ್ಕಿ | 4-22 | 23.04.1997 |
| 53. | 267/1 | ಖುಷ್ಕಿ | 0-16<br>0-23 | 27.01.1997<br>02.04.1997 |
| 54. | 267/2 | ಖುಷ್ಕಿ | 2-05<br>1-00 | 03.03.1997<br>26.02.1997 |
| 55. | 268 | ಖುಷ್ಕಿ | 2-15 | 19.03.1998 |
| 56. | 269/3 | ಖುಷ್ಕಿ | 1-15<br>0-01 ಖ | 17.11.1997 |
| 57. | 273 | ಖುಷ್ಕಿ | 1-36 | 08.01.1997 |

ವಿಶೇಷ ಭೂಸ್ವಾಧೀನಾಧಿಕಾರಿಗಳು

ಪಿ.ಡಿ. 22 ಕರ್ನಾಟಕ ಗೃಹ ಮಂಡಳಿ, ಬೆಂಗಳೂರು.

## ವಿಶೇಷ ಭೂಸ್ವಾಧೀನಾಧಿಕಾರಿಗಳ ಕಛೇರಿ, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು

## ಅಧಿಸೂಚನೆ ಕ್ರಮಸಂಖ್ಯೆ:ಭೂಸ್ವಾವಿ/ 6/2/2001-02, ದಿನಾಂಕ: 27ನೇ ಅಕ್ಟೋಬರ್, 2005

ಭೂಸ್ವಾಧೀನ ಅಧಿನಿಯಮ 1894ರ ಅನ್ವಯ ರಾಜ್ಯ ಸರ್ಕಾರದ ಕರ್ನಾಟಕ ಅಧಿನಿಯಮ 33/1991ರಲ್ಲಿ ತಿದ್ದುಪಡಿಯಾದಂತೆ ಭೂಸ್ವಾಧೀನ ಅಧಿನಿಯಮ 1894ರ ಅನ್ವಯ ಕಲಂ 16ರ ಪ್ರಕರಣ (2) ಉಪಪ್ರಕರಣ ಮೇರೆಗೆ ಈ ಮುಂದಿನ ಅನುಸೂಚಿಯಲ್ಲಿ ಸೂಚಿಸಲಾದ ಜಮೀನುಗಳನ್ನು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಕರ್ನಾಟಕ ಗೃಹ ಮಂಡಳಿಯ ವಸತಿ ಯೋಜನೆಗಾಗಿ ಅಧಿಕೃತವಾಗಿ ಭೂಸ್ವಾಧೀನ ಅಧಿನಿಯಮ ಪ್ರಕರಣ 16(1) ರಂತೆ ವಶಪಡಿಸಿಕೊಳ್ಳಲಾಗಿದೆ ಎಂದು ಈ ಮೂಲಕ ಪ್ರಕಟಿಸಲಾಗಿದೆ.

**ಅನುಸೂಚಿ**

ಜಿಲ್ಲೆ:ಮೈಸೂರು, ತಾಲ್ಲೂಕು: ಹುಣಸೂರು, ಹೋಬಳಿ: ಕಸಬಾ, ಗ್ರಾಮ: ಮೂಕನಹಳ್ಳಿ

| ಕ್ರ.ಸಂ. | ಸರ್ವೆ ನಂ. | ತರಹೆ | ವಿಸ್ತೀರ್ಣ ಎ-ಗುಂ | ವಶಪಡಿಸಿಕೊಂಡ ದಿನಾಂಕ |
|---|---|---|---|---|
| 1 | 2 | 3 | 4 | 5 |
| 1. | 112/1 | ಖುಷ್ಕಿ | 3-09<br>0-03 ಖ | 02.04.2005 |
| 2. | 112/2 | ಖುಷ್ಕಿ | 2-10<br>0-03 ಖ | 02.04.2005 |
| 3. | 112/3 | ಖುಷ್ಕಿ | 2-10<br>0-03 ಖ | 02.04.2005 |
| 4. | 112/4 | ಖುಷ್ಕಿ | 2-13<br>0-03 ಖ | 21.09.2005 |
| | | ಒಟ್ಟು | 10-02<br>0-12 ಖ | |

ವಿಶೇಷ ಭೂಸ್ವಾಧೀನಾಧಿಕಾರಿಗಳು

ಪಿ.ಡಿ. 23 ಕರ್ನಾಟಕ ಗೃಹ ಮಂಡಳಿ, ಬೆಂಗಳೂರು.

## ವಿಶೇಷ ಭೂಸ್ವಾಧೀನಾಧಿಕಾರಿಗಳ ಕಛೇರಿ, ಕರ್ನಾಟಕ ಗೃಹ ಮಂಡಳಿ, ಕಾವೇರಿ ಭವನ, ಬೆಂಗಳೂರು

## ಅಧಿಸೂಚನೆ ಕ್ರಮಸಂಖ್ಯೆ: ಭೂಸ್ವಾವಿ/ 6/5/2001-02, ದಿನಾಂಕ: 27ನೇ ಅಕ್ಟೋಬರ್, 2005

ಭೂಸ್ವಾಧೀನ ಅಧಿನಿಯಮ 1894ರ ಅನ್ವಯ ರಾಜ್ಯ ಸರ್ಕಾರದ ಕರ್ನಾಟಕ ಅಧಿನಿಯಮ 33/1991ರಲ್ಲಿ ತಿದ್ದುಪಡಿಯಾದಂತೆ ಭೂಸ್ವಾಧೀನ ಅಧಿನಿಯಮ 1894ರ ಅನ್ವಯ ಕಲಂ 16ರ ಪ್ರಕರಣ (2) ಉಪಪ್ರಕರಣ ಮೇರೆಗೆ ಈ ಮುಂದಿನ ಅನುಸೂಚಿಯಲ್ಲಿ ಸೂಚಿಸಲಾದ ಜಮೀನುಗಳನ್ನು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಕರ್ನಾಟಕ ಗೃಹ ಮಂಡಳಿಯ ವಸತಿ ಯೋಜನೆಗಾಗಿ ಅಧಿಕೃತವಾಗಿ ಭೂಸ್ವಾಧೀನ ಅಧಿನಿಯಮ ಪ್ರಕರಣ 16(1) ರಂತೆ ವಶಪಡಿಸಿಕೊಳ್ಳಲಾಗಿದೆ ಎಂದು ಈ ಮೂಲಕ ಪ್ರಕಟಿಸಲಾಗಿದೆ.

**ಅನುಸೂಚಿ**

ಜಿಲ್ಲೆ:ಮೈಸೂರು, ತಾಲ್ಲೂಕು: ಹುಣಸೂರು, ಹೋಬಳಿ: ಕಸಬಾ, ಗ್ರಾಮ: ಮೂಕನಹಳ್ಳಿ

| ಕ್ರ.ಸಂ. | ಸರ್ವೆ ನಂ. | ತರಹೆ | ವಿಸ್ತೀರ್ಣ ಎ-ಗುಂ | ವಶಪಡಿಸಿಕೊಂಡ ದಿನಾಂಕ |
|---|---|---|---|---|
| 1 | 2 | 3 | 4 | 5 |
| 1. | 40 | ಖುಷ್ಕಿ | 1-62 | 30.06.2005 |
| 2. | 43/1 | ಖುಷ್ಕಿ | 1-96 | 29.07.2005 |
| 3. | 43/2 | ಖುಷ್ಕಿ | 5-07 | 29.07.2005 |
| 4. | 44 | ಖುಷ್ಕಿ | 4-27 | 30.06.2005 |
| 5. | 45 | ಖುಷ್ಕಿ | 4-75 | 30.06.2005 |
| | | ಒಟ್ಟು | 4-75<br>17-67 | |

ವಿಶೇಷ ಭೂಸ್ವಾಧೀನಾಧಿಕಾರಿಗಳು
ಕರ್ನಾಟಕ ಗೃಹ ಮಂಡಳಿ, ಬೆಂಗಳೂರು.

ಪಿ.ಡಿ. 24

**FORM NO.151**
**Rule 315**
**Companies Act 1956**
**MEMBERS VOLUNTARY WINDING UP**
**Notice of appointment pursuant to section 516 Co.Act.**

| | |
|---|---|
| Name of the Company: | Metro Optix India Private Limited |
| Nature of Business: | Software Development. |
| Address of the registered Office: | 5/2, New No.11, Aga Abba Ali, I-Cross, Ulsoor, Bangalore-560042. |
| Name and Address of The Liquidator: | A.G. Sirsi,<br>3J, Palm Tree Place, Palm Gove Road, Austin Town, Bangalore-560047. |
| Date of Appointment: | 29th October 2005 |
| By whom Appointed: | By Members of the Company. |

PD-26 **LIQUIDATOR**

**KARNATAKA ELECTRICITY REGULATORY COMMISSION**
**6th & 7th Floor, Mahalaxmi Chambers, No.9/2, M.G. Road, Bangalore-560 001**
**NOTIFICATION**
**No. J/02/1/120, Dated: 20th January, 2006**

**Sub:** Retirement of Members of Advisory Committee of the Commission.

In accordance with Regulation 3(5) of Karnataka Electricity Regulatory Commission (State Advisory Committee) Regulations 2004, following members are retired with effect from 8th January 2006 on completion of the term of 3 yeras as Members of the Committee.

| Sl.No. | Name of the Retiring Member Sriyuths |
|---|---|
| 1. | Ravi Ganapathi. |
| 2. | President, KEB Engineers Association. |
| 3. | M.G. Prabhakar,<br>Member, Energy Committee, FKCCI. |
| 4. | KN Venkatagiri Rao,<br>Balakedarara Vedike, Sagar. |
| 5. | Director,<br>Confederation of Indian Industry. |

By Order of the Commission
**M. NAGARAJ**
Secretary,
Karnataka Electricity Regulatory
Commission, Bangalore-560 001.

**KARNATAKA ELECTRICITY REGULATORY COMMISSION**
**6th & 7th Floor, Mahalaxmi Chambers, No.9/2, M.G. Road, Bangalore-560 001**
**NOTIFICATION**
**No. J/02/1/121, Dated: 20th January, 2006**

**Sub:** Appointment of Members of Advisory Committee of the Commission.

Karnataka Electricity Regulatory Commission, in exercise of the powers conferred on it by sub section (1) of Section 87 of Electricity Act, 2003, read with Regulation 3 of KERC (State Advisory Committee) Regulations, 2004 hereby appoints the following personnel as Members of the Advisory Committee with effect from 9th January 2006, in place of the Members who have retired.

| Sl.No. | Name of the Member Sriyuths | Field of Representation |
|---|---|---|
| 1. | President, KEB Engineers Association | Labour |
| 2. | M.G. Prabhakar, Member, FKCCI | Commerce and Industries |
| 3. | K.N. Venkatagiri Rao, Balakedarara Vedike, Sagar. | Consumer/ NGO |
| 4. | B. Sathyanarayana Udupa, Secretary, Bharatheeya Kisan Sanga, Udupi. | Consumer/ NGO |

By Order of the Commission
**M. NAGARAJ**
Secretary,
Karnataka Electricity Regulatory Commission, Bangalore-560 001.

PD-21

**ಕೃಷಿ ಮಾರಾಟ ಇಲಾಖೆ**
**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ.16, 11ನೇ ರಾಜಭವನ ರಸ್ತೆ, ಪಿ.ಬಿ. ನಂ.5309, ಬೆಂಗಳೂರು-01**
**ಅಧಿಸೂಚನೆ**
**ಸಂಖ್ಯೆ: ಕೃಮಾಇ/ 281/ ನಿಯವಿ/ 2003, ದಿನಾಂಕ: 17ನೇ ಜನವರಿ, 2006**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ ಪ್ರಕರಣ 6ರ ಉಪಪ್ರಕರಣ (2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕದಲ್ಲಿ ಕೃಷಿ ಮಾರಾಟ ಇಲಾಖೆಯ ನಿರ್ದೇಶಕನಾಗಿರುವ ಸೈಯದ್ ಜಮೀರ್ ಪಾಷಾ ಆದ ನಾನು ಪುತ್ತುರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಕ್ಷೇತ್ರದಲ್ಲಿ ಕಾಲಕಾಲಕ್ಕೆ ಹೊರಡಿಸಲಾದ ಸರ್ಕಾರಿ ಅಧಿಸೂಚನೆಗಳ ಮೂಲಕ ಮಾರಾಟ ನಿಯಂತ್ರಣಕ್ಕೆ ಒಳಪಡಿಸಿರುವ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಕಡಬ ಮತ್ತು ಕೋಡಿಂಬಾಳ ಗ್ರಾಮ ಪಂಚಾಯಿತಿ ಪರಿಮಿತಿಯೊಳಗಿನ ಪ್ರದೇಶವನ್ನು "ಉಪಮಾರುಕಟ್ಟೆ" ಎಂದು ಮತ್ತು ಈ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸ್ಥಳವನ್ನು "ಉಪಮಾರುಕಟ್ಟೆ ಪ್ರಾಂಗಣ" ಎಂದು ಈ ಮೂಲಕ ಘೋಷಿಸಿದ್ದೇನೆ.

**ನಿಯಂತ್ರಣಕ್ಕೊಳಪಡಿಸಿರುವ ಕೃಷಿ ಉತ್ಪನ್ನಗಳು**

(1) ಜಾನುವಾರುಗಳು, (2) ಮೇಕೆಗಳು, (3) ಕುರಿಗಳು, (4) ಹತ್ತಿ (ಬೀಜ ತೆಗೆದ ಮತ್ತು ತೆಗೆಯದ), (5) ಎಲ್ಲಾ ಹೂ.ಗಳು, (6) ಸಜ್ಜೆ, (7) ಜವೆ ಗೋಧಿ, (8) ಜೋಳ, (9) ಕಂಬು, (10) ಮೆಕ್ಕೆ ಜೋಳ, (11) ನವಣೆ, (12) ಭತ್ತ, (13) ರಾಗಿ, (14) ಅಕ್ಕಿ, (15) ಸಾಮೆ (ಸಾವೆ), (16) ಗೋಧಿ, (17) ಅಂಟುವಾಳ, (18) ಬೊಂಬು, (19) ಬೆತ್ತ, (20) ಹಿಪ್ಪೆಬೀಜ, (21) ಹೊಂಗೇಬೀಜ, (22) ಬೇವಿನಬೀಜ, (23) ಸೀಗೇಕಾಯಿ, (24) ಹುಣಸೇಹಣ್ಣು, (25) ಹುಣಸೇಬೀಜ, (26) ಸೇಬು, (27) ಬಾಳೆಹಣ್ಣು, (28) ಬೋಎರೆಹಣ್ಣು, (29) ಹುಳಿಹಣ್ಣುಗಳು, (30) ಚಕ್ಕೋತನಹಣ್ಣು, (31) ಪೇರಲೆಹಣ್ಣು (ಸೀಬೆಹಣ್ಣು), (32) ದ್ರಾಕ್ಷಿ, (33) ಹಲಸಿನಹಣ್ಣು, (34) ಜಂಬುನೇರಳೆ ಹಣ್ಣು, (35) ನಿಂಬೆಹಣ್ಣು, (36) ಕರಬೂಜ, (37) ಮಾವಿನಹಣ್ಣು, (38) ಮೂಸಂಬಿ, (39) ಮರಸೇಬು, (40) ಪೈನಾಪಲ್ (ಅನಾನಸ್), (41) ಪಪ್ಪಾಯಿಹಣ್ಣು (ಪರಂಗಿಹಣ್ಣು), (42) ದಾಳಿಂಬೆಹಣ್ಣು, (43) ಸಪೋಟಾ, (44) ಸಿದ್ದೋಟ, (45) ಕಿತ್ತಳೆ, (46) ಕಲ್ಲಂಗಡಿ, (47) ನೆಲಗಡಲೇ (ಶೇಂಗಾ) (ಕಾಯಿ ಮತ್ತು ಬೀಜ), (48) ಹರಳುಬೀಜ, (49) ಹತ್ತಿಬೀಜ, (50) ಅಗಸೆಬೀಜ, (51) ಸಾಸುವೆ, (52) ಹುಚ್ಚೆಳ್ಳು, (53) ಕುಸುಬೆ, (54) ಎಳ್ಳು, (55) ಸೂರ್ಯಕಾಂತಿಬೀಜ, (56) ಸೋಯಾಬಿನ್, (57) ಅಡಿಕೆ, (58) ಗೋಡಂಬಿಬೀಜ, (59) ಒಣಮೆಣಸಿನಕಾಯಿ, (60) ತೆಂಗಿನಕಾಯಿ, (61) ಕೊಬ್ಬರಿ, (62) ಕೊತ್ತಂಬರಿಬೀಜ (ಧನಿಯಾ), (63) ಬೆಳ್ಳುಳ್ಳಿ, (64) ಶುಂಠಿ, (65) ಮೆಂತ್ಯ, (66) ಕಾಳುಮೆಣಸು, (67) ಅರಿಶಿನ, (68) ಅಲಸಂದೆ (ಇಡೀ ಮತ್ತು ಒಡೆದ), (69) ಅವರೆ (ಇಡೀ ಮತ್ತು ಒಡೆದ), (70) ಕಡಲೆ (ಇಡೀ ಮತ್ತು ಒಡೆದ), (71) ಉದ್ದು (ಇಡೀ ಮತ್ತು ಒಡೆದ), (72) ಬುಲ್ಲರ್ (ಇಡೀ ಮತ್ತು ಒಡೆದ), (73) ಹೆಸರು (ಇಡೀ ಮತ್ತು ಒಡೆದ), (74) ಹುರುಳಿ, (75) ಲಾಕ್ (ಇಡೀ ಮತ್ತು ಒಡೆದ), (76) ಮಡಿಕೆ (ಮಟಕಿ) (ಇಡೀ ಮತ್ತು ಒಡೆದ), (77) ಚೆನ್ನಂಗಿ (ಮಸೂರಿ) (ಇಡೀ ಮತ್ತು ಒಡೆದ), (78) ಬಟಾಣಿ, (79) ತೊಗರಿ (ಇಡೀ ಮತ್ತು ಒಡೆದ), (80) ಮೋತ್ (ಇಡೀ ಮತ್ತು ಒಡೆದ), (81) ಎಲ್ಲಾ ತರಕಾರಿಗಳು (ಗರ್ಕಿನ್ ಹೊರತುಪಡಿಸಿ ಸೊಪ್ಪುಗಳು ಸೇರಿಸಿ), (82) ಕಾಯಿಗಳು, (83) ಹಸಿರುಮೆಣಸಿನ ಕಾಯಿ, (84) ಈರುಳ್ಳಿ, (85) ಆಲೂಗಡ್ಡೆ, (86) ಸುವರ್ಣಗೆಡ್ಡೆ, (87) ಸಿಹಿಗೆಣಸು (ಗೆಣಸು), (88) ಟೊಮ್ಯಾಟೋ, (89) ಬೀಟೆ (ರೋಸ್‌ವುಡ್), (90) ಬಿಲ್ವಾಲ, (91) ಉರುವಲು ಕಟ್ಟಿಗೆ (92) ಗಂಜಾನ್, (93) ಹಡಗ, (94) ಹಳದಿ, (95) ಹನಿಮತ್ತಲ್, (96) ಹೊನ್ನೆ, (97) ಐಯಾನಿ, (98) ಹಲಸಿನಮರ, (99) ಜಂಬ, (100) ಕಲನ್, (101) ಕಿಂಡಲ್, (102) ಮಾವಿನಮರ, (103) ಮತ್ತಿ, (104) ನಂದಿ, (105) ರಾಂಪತ್ರೆ, (106) ತೇಗ (ಸಾಗುವಾನಿ), (107) ಬಿಳಿ ದೇವದಾರು (ಕೇದರ), (108) ಸಿಲ್ವರ್ ಓಕ್, (109) ನೀಲಗಿರಿ, (110) ವೀಳ್ಯೆದೆಲೆ, (111) ಬೆಲ್ಲ, (112) ತೆಂಗಿನಕಡ್ಡಿ, (113) ಒಣದ್ರಾಕ್ಷಿ.

**ಅನುಸೂಚಿ**

ಕಡಬಾ ಗ್ರಾಮ ಪಂಚಾಯಿತಿ ಪರಿಮಿತಯೊಳಗೆ ಬರುವ ಸರ್ವೆ ನಂ.36, 37, 38, 60, 61, 62, 63, 69, 70, 71, 72, 130, 132 ಮತ್ತು 191ರ 118.23 ಎಕರೆ ಪ್ರದೇಶ ಹಾಗೂ ಕೋಡಿಂಬಾಳ ಗ್ರಾಮದ ಸರ್ವೆ ನಂ.58, 59, 60, 61, 209, 243 ಮತ್ತು 260ರ 49.78 ಎಕರೆ ಪ್ರದೇಶದ (ಒಟ್ಟು 168.01 ಎಕರೆ) ಈ ಕೆಳಗಿನ ಸೀಮಾಬದ್ಧ ಸ್ಥಳ:

ಪೂರ್ವಕ್ಕೆ - ಕಡಬ ಕೆರೆ ಪ್ರದೇಶ.
ಪಶ್ಚಿಮಕ್ಕೆ - ಎಪಿಎಂಸಿ ಯ ಗ್ರಾಮೀಣ ಸಂತೆ ಮಾರುಕಟ್ಟೆ ಕಟ್ಟಡ.
ದಕ್ಷಿಣಕ್ಕೆ - ಕಡಬ ಬೈಲು ಮತ್ತು ಕಡಬ ದ.ಕ. ಜಿಲ್ಲಾ ಪಂಚಾಯಿತಿ ಹಿರಿಯ ಪ್ರಾಥಮಿಕ ಶಾಲೆ.
ಉತ್ತರಕ್ಕೆ - ಕಡಬ ಮೆಸ್ಕಾಂ ಕಛೇರಿ.

**ಸೈಯದ್ ಜಮೀರ್ ಪಾಷಾ**
ನಿರ್ದೇಶಕರು,
ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ.16,
11ನೇ ರಾಜಭವನ ರಸ್ತೆ, ಪಿ.ಬಿ.ನಂ.5309, ಬೆಂಗಳೂರು-01.

ಪಿ.ಆರ್. 176